KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜೂನ್ ೧೬, ೨೦೧೧, (ಜ್ಯೇಷ್ಠ ೨೬, ಶಕ ವರ್ಷ ೧೯೩೩) | ಸಂಚಿಕೆ ೨೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 138 ಸಆಸೇ 2009, ದಿನಾಂಕ : 30–03–2009.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 184 ಸಆಸೇ 2010 ದಿನಾಂಕ : 12–04–2010.
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರ ಪತ್ರಸಂಖ್ಯೆ : ಐಟಿಡಿ 16 ಡಿಐಎಸ್ 2010, ದಿನಾಂಕ : 10–03–2011.

**ಪ್ರಸ್ತಾವನೆ:**

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ಸೃಜಿಸಲಾಗಿರುವ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 01–04–2010 ರಿಂದ 31–03–2011ರ ವರೆಗೆ ಮುಂದುವರೆಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ : 01–04–2011 ರಿಂದ 31–03–2012ರವರೆಗೆ ಮುಂದುವರೆಸುವಂತೆ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯು ಕೋರಿದೆ.

| | | |
|---|---|---|
| 1. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 1 ಹುದ್ದೆ |
| 2. | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 3. | ಉಪ ಕಾರ್ಯದರ್ಶಿ | 1 ಹುದ್ದೆ |
| 4. | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 5. | ಅಧೀನ ಕಾರ್ಯದರ್ಶಿ/ಶಾಖಾಧಿಕಾರಿ | 1 ಹುದ್ದೆ |
| 6. | ಶಾಖಾಧಿಕಾರಿ | 1 ಹುದ್ದೆ |
| 7. | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 8. | ಹಿರಿಯ ಸಹಾಯಕರು/ಶೀಘ್ರಲಿಪಿಗಾರರು | 3 ಹುದ್ದೆಗಳು |
| 9. | ಕಿರಿಯ ಸಹಾಯಕರು | 1 ಹುದ್ದೆ |
| 10. | ದಲಾಯತ್ | 3 ಹುದ್ದೆಗಳು |
| 11. | ಚಾಲಕರು | 2 ಹುದ್ದೆಗಳು |
| | ಒಟ್ಟು | 16 ಹುದ್ದೆಗಳು |

ಈ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 179 ಸಿಅಸೇ 2011, ಬೆಂಗಳೂರು, ದಿನಾಂಕ: 23–03–2011**

ಕರ್ನಾಟಕ ಸರ್ಕಾರದ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ : 01–04–2011 ರಿಂದ 31–03–2012 ವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 1 ಹುದ್ದೆ |
| 2. | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 3. | ಉಪ ಕಾರ್ಯದರ್ಶಿ | 1 ಹುದ್ದೆ |
| 4. | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 5. | ಅಧೀನ ಕಾರ್ಯದರ್ಶಿ/ಶಾಖಾಧಿಕಾರಿ | 1 ಹುದ್ದೆ |
| 6. | ಶಾಖಾಧಿಕಾರಿ | 1 ಹುದ್ದೆ |
| 7. | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 8. | ಹಿರಿಯ ಸಹಾಯಕರು/ಶೀಘ್ರಲಿಪಿಗಾರರು | 3 ಹುದ್ದೆಗಳು |
| 9. | ಕಿರಿಯ ಸಹಾಯಕರು | 1 ಹುದ್ದೆ |
| 10. | ದಲಾಯತ್ | 3 ಹುದ್ದೆಗಳು |
| 11. | ಚಾಲಕರು | 2 ಹುದ್ದೆಗಳು |
| | ಒಟ್ಟು | 16 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

ಪಿ.ಆರ್. 893

## ಕಂದಾಯ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ತಳುಕು ಹೋಬಳಿ, ಉಳ್ಳರ್ತಿ ಕಾವಲ್ ಸ.ನಂ. 1ರಲ್ಲಿ 1–00 ಎಕರೆ ಜಮೀನನ್ನು ಪರಿಶಿಷ್ಟ ಜಾತಿಯವರಿಗೆ ನಿವೇಶನ ಹಂಚಿಕೆಗಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ರವರ ಪತ್ರ ಸಂಖ್ಯೆ : ಎಲ್‌ಎನ್‌ಡಿ : ಸಿಆರ್/19/10–11 ದಿನಾಂಕ : 08–05–2010.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ, ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ, ಚಳ್ಳಕೆರೆ ತಾಲ್ಲೂಕು, ತಳುಕು ಹೋಬಳಿ, ಉಳ್ಳರ್ತಿ ಕಾವಲ್ ಸ.ನಂ. 1ರಲ್ಲಿ ಒಟ್ಟು 2143.36 ಎಕರೆ ಅಮೃತ್ ಮಹಲ್ ಕಾವಲ್ ಜಮೀನಿರುತ್ತದೆ. ಇದರಲ್ಲಿ 1410.00 ಎಕರೆ ಜಮೀನನ್ನು ಬಾಬಾ ಅಣು ಸಂಶೋಧನೆ ಕೇಂದ್ರಕ್ಕೆ, ಇಸ್ರೋ ಸಂಸ್ಥೆಗೆ 473.20 ಎಕರೆ, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತಕ್ಕೆ 250–00 ಎಕರೆ ಜಮೀನು ಮಂಜೂರಾತಿಗೆ ಪ್ರಸ್ತಾಪಿಸಲಾಗಿದೆ. ಇದೇ ಸ.ನಂ.ನಲ್ಲಿ 1–00 ಎಕರೆ ಜಮೀನನ್ನು ನಿವೇಶನ ರಹಿತ ಪರಿಶಿಷ್ಟ ಜಾತಿಯ ಕುಟುಂಬದವರಿಗೆ ಮಂಜೂರಾತಿ ನೀಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ : 48 : ಎಲ್‌ಜಿಸಿ : 2010, ಬೆಂಗಳೂರು, ದಿನಾಂಕ: 21–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ತಳುಕು ಹೋಬಳಿ, ಉಳ್ಳರ್ತಿ ಕಾವಲ್ ಸ.ನಂ. 1ರಲ್ಲಿ 1–00 ಎಕರೆ ಅಮೃತ್ ಮಹಲ್ ಕಾವಲ್ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ರ ನಿಯಮ 18(A)ರನ್ವಯ ನಿವೇಶನ ರಹಿತರಿಗೆ ಉಚಿತವಾಗಿ ನಿವೇಶನ ಹಂಚಲು, ಸದರಿ 1–00 ಎಕರೆ ಜಮೀನನ್ನು ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಕಲಂ 71ರಡಿ ಕಾಯ್ದಿರಿಸಿ ಚಳ್ಳಕೆರೆ ತಾಲ್ಲೂಕು ಪಂಚಾಯಿತಿಗೆ ಹಸ್ತಾಂತರಿಸಲು ಆದೇಶಿಸಿದೆ.

ಈ ಆದೇಶವನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯವರ ಅನಧಿಕೃತ ಟಿಪ್ಪಣಿ ಸಂಖ್ಯೆ : ಪಸಂಮಿ : 09 : ಅಮಾಭೂ : 2010 ದಿ : 04–11–2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜೆ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ–3)

ಪಿ.ಆರ್. 894

## ಕಂದಾಯ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕಿನ ಅಣೂರು ಗ್ರಾಮದ ರಿ.ಸ.ನಂ. 28 ಮತ್ತು 60ರಲ್ಲಿ ಒಟ್ಟು 14 ಎಕರೆ 30 ಗುಂಟೆ ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ: ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ರವರ ಪತ್ರ ಸಂಖ್ಯೆ : ಕ್ರಸಂ : ಪ್ರಾಆಬೆ : ಎಲ್‌ಜಿಎಲ್ : ವಿವ-35:09-10 ದಿ: 23-03-2010 ಮತ್ತು 23-06-2010.

**ಪ್ರಸ್ತಾವನೆ:**

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ರವರು ಮೇಲೆ ಓದಲಾದ ದಿನಾಂಕ : 23-03-2010ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕು, ಅಣೂರು ಗ್ರಾಮದ ಸ.ನಂ.28 ಹಾಗೂ ಸ.ನಂ.60 ರಲ್ಲಿನ ಒಟ್ಟು 14 ಎಕರೆ 30 ಗುಂಟೆ ಜಮೀನನ್ನು 30 ವರ್ಷಗಳ ಅವಧಿಗೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ: ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಗುತ್ತಿಗೆ ನೀಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2. ಪ್ರಸ್ತಾವನೆ ಪರಿಶೀಲಿಸಲಾಗಿ ಮೆ: ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಅಣೂರು ಗ್ರಾಮದ ಸ.ನಂ.28ರ ಜಮೀನು ಆರ್‌ಟಿಸಿಯ ಕಲಂ 9ರಲ್ಲಿ **ಶ್ರೀ ಮಲ್ಲೇಶ್ವರ ಗುಡ್ಡ** ಎಂಬುದಾಗಿ ವರ್ಗೀಕೃತಗೊಂಡಿದ್ದು 140 ಎಕರೆ 34 ಗುಂಟೆ ಇರುತ್ತದೆ. ಹಾಗೆಯೇ ಸ.ನಂ. 60ರ ಜಮೀನು ಆರ್‌ಟಿಸಿಯ ಕಲಂ 9ರಲ್ಲಿ **ಗುಡ್ಡ** ಎಂಬುದಾಗಿ ವರ್ಗೀಕೃತಗೊಂಡಿದ್ದು 19 ಎಕರೆ 35 ಗುಂಟೆ ಇರುತ್ತದೆ. ಪ್ರಸ್ತಾಪಿತ ಜಮೀನು ಸರ್ಕಾರಿ ಗುಡ್ಡದ ಜಮೀನಾಗಿದ್ದು ಯಾವುದೇ ಬೆಲೆ ಬಾಳುವ ಗಿಡಮರ/ಕಟ್ಟಡಗಳು ಇರುವುದಿಲ್ಲ. ಪ್ರಸ್ತಾಪಿತ ಜಮೀನು ಅತಿಕ್ರಮಣದಿಂದ ಮುಕ್ತವಿದ್ದು ಬೇರೆ ಯಾವುದೇ ಉದ್ದೇಶಕ್ಕೆ ಜಮೀನು ಮಂಜೂರಾತಿ ಕುರಿತು ಪ್ರಸ್ತಾವನೆ ಸಲ್ಲಿಸಿರುವುದಿಲ್ಲ. ಹಾಗೂ ಅರ್ಜಿದಾರ ಸಂಸ್ಥೆಗೆ ಪ್ರಸ್ತಾಪಿತ ಜಮೀನಿನಲ್ಲಿ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು ಯಾವುದೇ ಅಭ್ಯಂತರ ಇರುವುದಿಲ್ಲ ಎಂಬುದಾಗಿ ಗ್ರಾಮ ಪಂಚಾಯತ್ ಬೀಸಲಹಳ್ಳಿ ರವರು ತಿಳಿಸಿರುತ್ತಾರೆಂದು ವರದಿ ಮಾಡುತ್ತಾ ಸದರಿ 14.30 ಎಕರೆ ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಬಹುದೆಂದು ಜಿಲ್ಲಾಧಿಕಾರಿಗಳು, ಹಾವೇರಿ ರವರು ಶಿಫಾರಸ್ಸುಮಾಡಿರುತ್ತಾರೆಂದು ವರದಿ ಮಾಡಿದ್ದಾರೆ. ಹಾಗೆಯೇ ಅಣೂರು ಗ್ರಾಮದ ಜಮೀನಿನ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ. 55,000/- ಇರುವುದಾಗಿ ವರದಿ ಮಾಡಿದ್ದಾರೆ.

3. ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ : 31 : ಎಲ್‌ಜಿಡಿ : 2010, ಬೆಂಗಳೂರು, ದಿನಾಂಕ: 09-02-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕು ಅಣೂರು ಗ್ರಾಮದ ಸ.ನಂ.28 ರಲ್ಲಿನ 140 ಎಕರೆ 34 ಗುಂಟೆ ಜಮೀನಿನ ಪೈಕಿ 10 ಎಕರೆ 28 ಗುಂಟೆ ಜಮೀನು ಹಾಗೂ ಸದರಿ ಗ್ರಾಮದ ಸ.ನಂ.60 ರಲ್ಲಿನ 19 ಎಕರೆ 35 ಗುಂಟೆ ಜಮೀನಿನ ಪೈಕಿ 4 ಎಕರೆ 02 ಗುಂಟೆ ಒಟ್ಟು 14 ಎಕರೆ 30 ಗುಂಟೆ ಜಮೀನನ್ನು ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ದರದ ಶೇ. 10ರಷ್ಟು ಗುತ್ತಿಗೆ ದರ ನಿಗದಿಪಡಿಸಿ ಸದರಿ ಗುತ್ತಿಗೆ ದರವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇಕಡ 10ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(3)(ಬಿ)ರನ್ವಯ 30 ವರ್ಷಗಳ ಅವಧಿಗೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಉದ್ದೇಶಕ್ಕಾಗಿ ಮೆ: ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಗುತ್ತಿಗೆ ನೀಡಲು ಸರ್ಕಾರದ ಅನುಮತಿ ನೀಡಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ : ಆಇ/940/ವೆಚ್ಚ-7/2011 ದಿನಾಂಕ : 01-02-2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ-3)

ಪಿ.ಆರ್. 895

## ಕಂದಾಯ ಸಚಿವಾಲಯ

**ವಿಷಯ :** ರಾಯಚೂರು ಜಿಲ್ಲೆ, ಸಿಂದನೂರು ತಾಲ್ಲೂಕಿನ ಕಲ್ಮಂಗಿ ಗ್ರಾಮದ ಜಮೀನಿನ ಸ.ನಂ. 290 ರಲ್ಲಿನ 9.66 ಹೆಕ್ಟೇರ್ ಮತ್ತು ನಂ. 313ರಲ್ಲಿ 7.77 ಹೆಕ್ಟೇರ್ ಒಟ್ಟು 17.43 ಹೆಕ್ಟೇರ್ ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿ., ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ, ರಾಯಚೂರು ರವರ ಪತ್ರ ಸಂಖ್ಯೆ : ಎಲ್‌ಎನ್‌ಡಿ/142/2010-11 ದಿನಾಂಕ : 24-09-2010 ಮತ್ತು ದಿನಾಂಕ : 21-01-2011.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ, ರಾಯಚೂರು ರವರ ಮೇಲೆ ಓದಲಾದ ದಿನಾಂಕ : 24-09-2010ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ರಾಯಚೂರು ಜಿಲ್ಲೆ, ಸಿಂಧನೂರು ತಾಲ್ಲೂಕು, ಕಲ್ಮಂಗಿ ಗ್ರಾಮದ ಸ.ನಂ. 290ರಲ್ಲಿ 426.02 ಎಕರೆ ಮತ್ತು ಸ.ನಂ. 313ರಲ್ಲಿ 443.37 ಎಕರೆ ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿ., ರವರಿಗೆ ಗುತ್ತಿಗೆ ನೀಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

2. ಪ್ರಸ್ತಾವನೆ ಪರಿಶೀಲಿಸಲಾಗಿ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಕಲ್ಮಂಗಿ ಗ್ರಾಮದ ಸ.ನಂ. 290ರ ಜಮೀನು **ಆರ್‌ಟಿಸಿಯ** ಕಲಂ 9ರಲ್ಲಿ **ಗಾಯರಾಣ ಅರಣ್ಯ ಇಲಾಖೆ** ಎಂಬುದಾಗಿ ವರ್ಗೀಕೃತಗೊಂಡಿದ್ದು 422.02 ಎಕರೆ ಇರುತ್ತದೆ. ಸ.ನಂ. 313ರ ಜಮೀನು ಆರ್‌ಟಿಸಿಯ ಕಲಂ 9ರಲ್ಲಿ **ಸರ್ಕಾರಿ ಗುಡ್ಡ ಅರಣ್ಯ ಇಲಾಖೆ** ಎಂಬುದಾಗಿ ವರ್ಗೀಕೃತಗೊಂಡಿರುತ್ತದೆ. ಜಿಲ್ಲಾಧಿಕಾರಿಗಳ ವರದಿಯಂತೆ ಕಲ್ಮಂಗಿ ಗ್ರಾಮದ ಸ.ನಂ. 290ರಲ್ಲಿ 426.02 ಎಕರೆ ಮತ್ತು ಸ.ನಂ. 313ರಲ್ಲಿ 443.37 ಎಕರೆ ಜಮೀನುಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 1963(ಕರ್ನಾಟಕ ಕಾಯ್ದೆ 1964ರ ಕಲಂ 5) ಕಲಂ 4ರನ್ವಯ ಕಾಯ್ದಿಟ್ಟ ಅರಣ್ಯಗಳಾಗಿ ರೂಪಿಸಿ ಪ್ರಕಟಣೆ ಹೊರಡಿಸಲು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಅರಣ್ಯ ಭವನ ಬೆಂಗಳೂರು ಇವರಿಗೆ ಉಪ ಸಂರಕ್ಷಣಾಧಿಕಾರಿಗಳು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆದರೆ ಪ್ರಕಟಣೆ ಹೊರಡಿಸಲು ಸಲ್ಲಿಸಿದ್ದ ಪ್ರಸ್ತಾವನೆಯನ್ನು ಪುನರ್ ಪರಿಶೀಲಿಸಲು ಹಿಂದಿರುಗಿಸಲಾಗಿದೆ ಎಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ತಿಳಿಸಿರುತ್ತಾರೆಂದು ವರದಿ ಮಾಡಿದ್ದಾರೆ. ಅಲ್ಲದೆ ಅರಣ್ಯ ಕ್ಷೇತ್ರ ನಿರ್ಧಾರಾಧಿಕಾರಿಗಳು ಬಳ್ಳಾರಿ ರವರು ಜಿಲ್ಲಾಧಿಕಾರಿಗಳು ರಾಯಚೂರು ರವರಿಗೆ ವಿಳಾಸಿಸಿ ಬರೆದಿರುವ ದಿನಾಂಕ : 18–01–2011ರ ಪತ್ರದಲ್ಲಿ ರಾಯಚೂರು ಜಿಲ್ಲೆ ಸಿಂಧನೂರು ತಾಲ್ಲೂಕಿನ ಕಲ್ಮಂಗಿ ಗ್ರಾಮದ ಜಮೀನಿನ ಸ.ನಂ.290 ಮತ್ತು 313ರ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಅಧಿನಿಯಮ 1963 ಕಲಂ 4ಅನ್ವಯ ಘೋಷಣೆಯಾದ ಬಗ್ಗೆ ಯಾವುದೇ ನೋಟಿಫಿಕೇಷನ್ ಅಥವಾ ಅಧಿಸೂಚನೆ ಈ ಕಚೇರಿಗೆ ಇದುವರೆಗೂ ಸ್ವೀಕೃತವಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ.

3. ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ರವರಿಗೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಕಲ್ಮಂಗಿ ಗ್ರಾಮದ ಎರಡೂ ಸರ್ವೆ ನಂಬರುಗಳ ಜಮೀನು ಎತ್ತರ ಗುಡ್ಡ ಪ್ರದೇಶವಾಗಿದ್ದು ಗಾಳಿಯಂತ್ರ ಅಳವಡಿಸಲು ಯೋಗ್ಯವಾಗಿರುವುದಾಗಿ ಜಿಲ್ಲಾಧಿಕಾರಿಗಳು ವರದಿ ಮಾಡುತ್ತಾ ಸದರಿ ಜಮೀನನ್ನು ಸಂಸ್ಥೆಯವರಿಗೆ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡುವುದು ಸೂಕ್ತವೆಂದು ಅಭಿಪ್ರಾಯಿಸಿರುತ್ತಾರೆ.

4. ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 48 ಎಲ್‌ಜಿಆರ್ 2010, ಬೆಂಗಳೂರು, ದಿನಾಂಕ: 18–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಯಚೂರು ಜಿಲ್ಲೆ, ಸಿಂಧನೂರು ತಾಲ್ಲೂಕು, ಕಲ್ಮಂಗಿ ಗ್ರಾಮದ ಸ.ನಂ. 290ರಲ್ಲಿ 9.66 ಹೆಕ್ಟೇರ್ ಮತ್ತು ಸ.ನಂ. 313ರಲ್ಲಿ 7.77 ಹೆಕ್ಟೇರ್ ಒಟ್ಟು 17.43 ಹೆಕ್ಟೇರ್ ಜಮೀನನ್ನು ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ದರದ ಶೇ. 10ರಷ್ಟು ಗುತ್ತಿಗೆ ದರ ನಿಗದಿಪಡಿಸಿ ಸದರಿ ಗುತ್ತಿಗೆ ದರವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇಕಡ 10ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(3)(ಬಿ)ರನ್ವಯ 30 ವರ್ಷಗಳ ಅವಧಿಗೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಉದ್ದೇಶಕ್ಕಾಗಿ ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಬೆಂಗಳೂರು ರವರಿಗೆ ಗುತ್ತಿಗೆ ನೀಡಲು ಸರ್ಕಾರದ ಅನುಮತಿ ನೀಡಿ ಆದೇಶಿಸಲಾಗಿದೆ.

ಸದರಿ ಗುತ್ತಿಗೆಯ ವಿಧಿವಿಧಾನಗಳ ಬಗ್ಗೆ ಜಿಲ್ಲಾಧಿಕಾರಿಗಳು, ಸರ್ಕಾರಿ ಸುತ್ತೋಲೆ ಸಂಖ್ಯೆ : ಆರ್‌ಡಿ : 78 : ಎಲ್‌ಜಿಪಿ : 2009 ದಿ : 04–01–2011ರಲ್ಲಿನ ಸೂಚನೆಗಳನ್ವಯ ಸದರಿ ಸಂಸ್ಥೆಯವರೊಂದಿಗೆ ನೇರವಾಗಿ ವ್ಯವಹರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ/238/ವೆಚ್ಚ–7/2011 ದಿನಾಂಕ : 16–03–2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜೆ. ಲಕ್ಷ್ಮೀನಾರಾಯಣ**

ಪಿ.ಆರ್. 896

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಮುರುಗಣ್ಣನ ಕೆರೆ, ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 89 ಭೂಸ್ವಾಪ್ರ 2008, ದಿನಾಂಕ : 25–02–2009.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1/3/ಭೂಸ್ವಾಧೀನ/10–11/1545, ದಿನಾಂಕ 03–07–2010.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಮುರುಗಣ್ಣನ ಕೆರೆ, ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲುಗಿನಕಟ್ಟೆ ಮತ್ತು ಹೊಸೂರು ಗ್ರಾಮಗಳ ಸ.ನಂ.ಗಳಿಗೆ ಸೇರಿದ ಜಮೀನುಗಳಿಗೆ ಸೊರಬ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಪಾವತಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ : 25–02–09ರ ಸರ್ಕಾರದ ಆದೇಶ ಅನುಮೋದನೆ ನೀಡಿದೆ. ಈ ಆದೇಶದಲ್ಲಿ ಸೇರಿದ್ದ ಎಲ್.ಎ.ಸಿ. ಸಂಖ್ಯೆ : 51/07ರಲ್ಲಿ ಹೊಸೂರು ಗ್ರಾಮದ ಸ.ನಂ.96ರ 0–16 ಎಕರೆಗೆ ರೂ. 88,355–00ಗಳ ಪರಿಹಾರ ಧನ ಪಾವತಿಸಲು ಅನುಮೋದನೆ ನೀಡಲಾಗಿತ್ತು. ಈ ಎಲ್.ಎ.ಸಿ. ಪ್ರಕರಣದಲ್ಲಿ ಹೊಸೂರು ಗ್ರಾಮದ ಸ.ನಂ.96ರ 0–16 ಎಕರೆ ಅಲ್ಲದೆ ಇದೇ ಗ್ರಾಮದ ಸ.ನಂ.106/1ರ 3–24 ಎಕರೆಗೆ ಸಹ ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ಆದೇಶಿಸಿತ್ತು. ಕೈಬಿಟ್ಟು ಹೋಗಿರುವ ಸ.ನಂ. 106/1ರ 3–24 ಎಕರೆ ಜಮೀನಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ಧನ ಪಾವತಿಸಲು ರೂ. 8,09,468–00ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕ : 03–07–10ರ ಪತ್ರದಲ್ಲಿ ಕೋರಿದ್ದಾರೆ.

ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ಹೊಸೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 51/07 | 106/1 | 3-24 | 5,85,733-00 |
| ಒಟ್ಟು | | | | 5,85,733-00 |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ : ಆರ್‌ಡಿ 530 ಎಲ್‌ಎಸಿ 2008, ದಿನಾಂಕ : 27-12-2008ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 125 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಮುರುಗಣ್ಣನ ಕೆರೆ, ಏರಿ ಮತ್ತು ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲುಗಿನಕಟ್ಟೆ ಮತ್ತು ಹೊಸೂರು ಗ್ರಾಮಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ : 51/07 ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 5,85,733-00ಗಳನ್ನು (ಐದು ಲಕ್ಷದ ಎಂಭತ್ತೈದು ಸಾವಿರದ ಏಳುನೂರ ಮೂವತ್ಮೂರು ರೂ.ಗಳು ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19-03-2011 ರಲ್ಲಿ ಒದಗಿಸಿರುವ ಪೂರಕ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20-10-2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿಆರ್.ನಂ. 897 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿತ್ರದುರ್ಗ ತಾಲ್ಲೂಕು ಕೊಳಹಾಳ್ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ-1/3/ಭೂಸ್ವಾಧೀನ/2010-11/1623, ದಿನಾಂಕ 20-07-2010.

**ಪ್ರಸ್ತಾವನೆ:**

ಚಿತ್ರದುರ್ಗ ತಾಲ್ಲೂಕು ಕೊಳಹಾಳ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಟ್ಲಹಳ್ಳಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಚಿತ್ರದುರ್ಗ ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ರೂ. 8,87,638 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ : 20-07-2010ರ ಪತ್ರದಲ್ಲಿ ಕೋರಿರುತ್ತಾರೆ. ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿವೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 31-10-1991.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 11(ಎ)ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ : 31-12-1993.

ಭೂಸ್ವಾಧೀನಕ್ಕೊಳಪಟ್ಟ ಜಟ್ಲಹಳ್ಳಿ ಗ್ರಾಮದ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಪರಿಹಾರ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ 1894ರ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಚಿತ್ರದುರ್ಗ ಇಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ಸಲ್ಲಿಸಿದ್ದು, ನ್ಯಾಯಾಲಯವು ದಿನಾಂಕ : 31-10-2003ರಂದು ನೀಡಿದ ಆದೇಶದಲ್ಲಿ ಹೆಚ್ಚಿನ ಪರಿಹಾರ ನಿಗದಿ ಮಾಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಸರ್ಕಾರ ಸಲ್ಲಿಸಿದ್ದ ಎಂ.ಎಫ್.ಎ. ಸಂಖ್ಯೆ : 6031/04 ಮತ್ತು 6033/04ನ್ನು ನ್ಯಾಯಾಲಯವು ದಿನಾಂಕ : 23-02-2010ರಂದು ವಜಾ ಮಾಡಿದೆ. ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಲಾ 272 ಎಲ್‌ಎಸ್‌ಪಿ 2010, ದಿನಾಂಕ : 13-04-2010 ರಂದು ಅಭಿಪ್ರಾಯ ನೀಡಿರುತ್ತದೆ.

ನ್ಯಾಯಾಲಯವು ಹೆಚ್ಚುವರಿ ಪರಿಹಾರಕ್ಕೆ ತೀರ್ಪು ನೀಡಿರುವ ವಿವರ ಈ ಕೆಳಕಂಡಂತಿದೆ :

ರೂ.ಗಳಲ್ಲಿ

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ಎಂ.ಎಫ್.ಎ ಸಂಖ್ಯೆ | ಜಟ್ಲಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 139/95 | 6031/04 | 6/2 | 4–08 | 378361 |
| 2 | 5/96 | 6033/04 | 12/2ಪಿ | 3–25 | 431905 |
| ಒಟ್ಟು | | | | | 810266 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 97 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಚಿತ್ರದುರ್ಗ ತಾಲ್ಲೂಕು ಕೊಳಹಾಳ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ ನೀಡಿದ ಆದೇಶದಂತೆ ಪರಿಹಾರ ಮೊತ್ತ ರೂ. 8,10,266–00ಗಳನ್ನು (ಎಂಟು ಲಕ್ಷದ ಹತ್ತು ಸಾವಿರದ ಇನ್ನೂರ ಅರವತ್ತಾರು ರೂಪಾಯಿಗಳು ಮಾತ್ರ)ಗಳನ್ನು ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 898

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗಕ್ಕೆ ಸಂಬಂಧಿಸಿದಂತೆ ಮುಂದುವರಿದ ಯೋಜನೆ ಮತ್ತು ಯೋಜನೇತರ ಯೋಜನೆಗಳನ್ನು 2011–12ನೇ ಸಾಲಿನ ಅವಧಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ ಸಂಖ್ಯೆ : ಮಾತಂಇ 12 ಅಡವಿ 2010, ದಿನಾಂಕ : 18–03–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಪತ್ರದಲ್ಲಿ, 2011–12ನೇ ಸಾಲಿನ ಆಯವ್ಯಯದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಮುಂದುವರಿದ ಯೋಜನೆಗಳಿಗೆ ವಂಟನೆ ಮಾಡಲಾಗಿದೆ.

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ : 18–03–2011 ರಂದು ನಡೆದ ಸಭೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದ ಅಧೀನಕ್ಕೆ ಒಳಪಡುವ ಸಂಘ ಸಂಸ್ಥೆಗಳಿಗೆ 2011–12ನೇ ಸಾಲಿನಲ್ಲಿ ಮುಂದುವರಿದ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳಿಗೆ 2011–12ನೇ ಸಾಲಿಗೆ ಮುಂದುವರಿಸಿ ಅನುಮೋದನೆ ನೀಡಲು ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಿಯಇ 189 ವಿತ್ರಮ 2010, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದ ಅಧೀನಕ್ಕೆ ಒಳಪಡುವ ಈ ಕೆಳಕಂಡ ಸಂಘ ಸಂಸ್ಥೆಗಳಿಗೆ 2011–12ನೇ ಆರ್ಥಿಕ ಸಾಲಿನಲ್ಲಿ ಮುಂದುವರಿದ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳಿಗೆ ತಾತ್ವಿಕವಾಗಿ ಅನುಮೋದನೆಯನ್ನು ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಸರ್ಕಾರವು ಮಂಜೂರಾತಿ ನೀಡಲಾಗಿದೆ.

| | |
|---|---|
| 1. | ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ |
| 2. | ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪಗಳ ಉಸ್ತುವಾರಿ ಕೇಂದ್ರ |
| 3. | ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು |
| 4. | ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ |
| 5. | ಜವಾಹರ್‌ಲಾಲ್ ನೆಹರು ತಾರಾಲಯ |
| 6. | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ |
| 7. | ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು |
| 8. | ಭಾರತೀಯ ವಿಜ್ಞಾನ ಸಂಸ್ಥೆ, ಚಳ್ಳಕೆರೆ |

**ಷರತ್ತುಗಳು :**

1. ಹೊಸ ಯೋಜನೆಗಳಿಗೆ ಮುಂದುವರಿದ ಯೋಜನಾ ಕಾರ್ಯಕ್ರಮಗಳ ಹೊಸ ಘಟಕಗಳಿಗೆ ಪ್ರತ್ಯೇಕವಾಗಿ ಮಂಜೂರಾತಿಯನ್ನು ಪಡೆಯುವುದು.
2. 2011–12ನೇ ಸಾಲಿಗೆ ಆರ್ಥಿಕ ಇಲಾಖೆಯು ನೀಡಿದ ಸೂಚನೆಗಳನ್ವಯ ದಿ : 01–04–2011 ರಿಂದ 31–03–2012 ರವರೆಗಿನ ಅವಧಿಯ ವೆಚ್ಚವನ್ನು ಅನುಸೂಚಿಯಲ್ಲಿ ಸೃಜಿಸಿರುವ ಮೊತ್ತಕ್ಕೆ ಸೀಮಿತಗೊಳಿಸುವುದು ಮತ್ತು ಎಲ್ಲಾ ಮಾರ್ಗಸೂಚಿಗಳನ್ನು ಚಾಚೂ ತಪ್ಪದೇ ಪಾಲಿಸುವುದು.
3. 2011–12ನೇ ಆರ್ಥಿಕ ಸಾಲಿಗೆ ನಿಗದಿಪಡಿಸಿರುವ ಮೊತ್ತವನ್ನು 4 ಸಮ ಕಂತುಗಳಲ್ಲಿ ಬಿಡುಗಡೆ ಮಾಡಲಾಗುವುದು.
4. ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರರಾದ ಅಧಿಕಾರಿಗಳು ಅವರಿಗೆ ನೀಡಲಾದ ಆರ್ಥಿಕ ಅಧಿಕಾರಕ್ಕೆ ಒಳಪಟ್ಟು ಯೋಜನಾ ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರತಕ್ಕದ್ದು.
5. 1999ರ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮವನ್ನು ಕಡ್ಡಾಯವಾಗಿ ಪಾಲಿಸುವುದು.
6. ಸಂಘ ಸಂಸ್ಥೆಗಳಿಗೆ ಬಿಡುಗಡೆ ಮಾಡುವ ಅನುದಾನದ ಬಗ್ಗೆ ಮಾರ್ಗಸೂಚಿಯನ್ನು ರೂಪಿಸಿ ಅದರನ್ವಯ ಕ್ರಮ ತೆಗೆದುಕೊಳ್ಳುವುದು.
7. ಪುಸ್ತಕ ಪ್ರಕಟಣೆ, ಖರೀದಿ, ಮಾರಾಟ, ಪ್ರೋತ್ಸಾಹಧನಕ್ಕೆ ಸಂಬಂಧಿಸಿದಂತೆ ಮಾರ್ಗಸೂಚಿಯನ್ನು ರೂಪಿಸಿ ಅದರನ್ವಯ ಕ್ರಮ ತೆಗೆದುಕೊಳ್ಳುವುದು.
8. ಸರ್ಕಾರದಿಂದ ಬಿಡುಗಡೆ ಮಾಡಿದ ಅನುದಾನವನ್ನು ಅದೇ ಸಾಲಿನಲ್ಲಿಯೇ ಉಪಯೋಗಿಸಿ ಉಪಯೋಗತಾ ಪ್ರಮಾಣ ಪತ್ರಗಳನ್ನು ತಪ್ಪದೇ ಸಲ್ಲಿಸತಕ್ಕದ್ದು.
9. ಹಂಚಿಕೆ ಮಾಡಲಾದ ಅನುದಾನದ ಮೊತ್ತದ ಬಿಡುಗಡೆಯು ಸರ್ಕಾರದ ಬದಲಾವಣೆಗೆ ಒಳಪಡುತ್ತದೆ. ಅನುದಾನದ ಹಂಚಿಕೆಯನ್ನು ಈ ಆದೇಶಕ್ಕೆ ಲಗತ್ತಿಸಲಾದ ಅನುಬಂಧದಲ್ಲಿ ತೋರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ : 16–05–2008ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಆರ್ಥಿಕ ಇಲಾಖೆಯ ಸಹಮತಿ ಇದೆ ಎಂದು ಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಅನುಬಂಧ

ಸರ್ಕಾರಿ ಆದೇಶ ಸಂಖ್ಯೆ : ವಿಯಇ 189 ವಿತ್ರಮ 2010, ದಿನಾಂಕ : 19–03–2011

ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದ 2011–12ನೇ ಸಾಲಿನ ಮುಂದುವರೆದ ಯೋಜನೆಗಳು

ರೂ.ಲಕ್ಷಗಳಲ್ಲಿ

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಯೋಜನೆ/ವೈಜ್ಞಾನಿಕ ಸಂಸ್ಥೆ/ಚಟುವಟಿಕೆಗಳಿಗೆ ಸಹಾಯಾನುದಾನದ ವಿವರ | 2011–12ನೇ ಸಾಲಿನ ಆಯವ್ಯಯ ಹಂಚಿಕೆ | ಇಲಾಖೆಯ ಹಂಚಿಕೆ |
|---|---|---|---|---|
| | | ಮುಂದುವರೆದ ಯೋಜನೆಗಳು : | | |
| 1 | 3425–60–200–0–01–(101) (ಯೋಜನೆ) | ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯನುದಾನ | 500.00 | |
| | | 1. ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ | – | 50.00 |
| | | 2. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು. | – | 54.00 |
| | | 3. ಜವಹಾರ್‌ಲಾಲ್ ನೆಹರು ತಾರಾಲಯ | – | 60.00 |
| | | 4. ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾಮಂಡಳಿ | – | 56.00 |

| | | | | |
|---|---|---|---|---|
| | | 5. ಇತರೆ ವೈಜ್ಞಾನಿಕಸಂಸ್ಥೆಗಳು/ಕಾರ್ಯಚಟುವಟಿಕೆಗಳಿಗೆ ಸಹಾಯಾನುದಾನ | – | 150.00 |
| | | 6. ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಕಾರ್ಯಕ್ರಮಕ್ಕೆ | – | 130.00 |
| 2 | 3425–60–200–0–16(101)<br>(ಯೋಜನೆ) | ವಿಜ್ಞಾನ ಮತ್ತು ತಂತ್ರಜ್ಞಾನ ಯೋಜನೆಗಳ ಸಹಾಯಾನುದಾನ | 300.00 | – |
| 3 | 3425–60–200–0–19(101)<br>(ಯೋಜನೆ) | ನಾನೊ ತಂತ್ರಜ್ಞಾನಕ್ಕೆ ಬೆಂಬಲ ಸಹಾಯಾನುದಾನ | 100.00 | – |
| 4 | 3425–60–200–0–20(101) | ಜಿಲ್ಲಾ ವಿಜ್ಞಾನ ಕೇಂದ್ರಗಳು ಸಹಾಯಾನುದಾನ<br>1. ಜಿಲ್ಲಾ ವಿಜ್ಞಾನ ಕೇಂದ್ರಗಳ ಸ್ಥಾಪನೆ<br>2. ಮಂಗಳೂರು ಪಿಲಿಕುಳದಲ್ಲಿ ತಾರಾಲಯ ಸ್ಥಾಪನೆ | 560.00<br>–<br>– | <br>60.00<br>500.00 |
| 5 | 3425–60–600–0–02<br>(059)(ಯೋಜನೆ) | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ<br>1. ದಾರ್ಶನಿಕ ಸಮೂಹ ಕಾರ್ಯಕ್ರಮಕ್ಕೆ<br>2. SCSP<br>3. TSP<br>4. ಚಿತ್ರದುರ್ಗ ಭಾರತೀಯ ವಿಜ್ಞಾನ ಸಂಸ್ಥೆ, ಚಳ್ಳಕೆರೆ | 1000.00<br>–<br>–<br>–<br>– | <br>595.00<br>200.00<br>75.00<br>130.00 |
| 6 | 3425–60–600–0–03<br>(059)(ಯೋ) | ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಸುಧಾರಣೆಗೆ ಕರ್ನಾಟಕ ನಿಧಿ (K-Fist)<br>1. SCSP<br>2. TSP | 500.00<br>–<br>–<br>– | <br>322.00<br>118.40<br>59.60 |
| 7 | 3455–00–200–0–01<br>(059)(ಯೋ) | ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ :<br>1. ಸಂಸ್ಥೆಯ ಆಡಳಿತ ನಿರ್ವಹಣೆ ವಾರ್ಷಿಕ ಅನುದಾನ<br>2. ಮಾಸ್ಟರ್ ಕಂಟ್ರೋಲ್ ಕೇಂದ್ರ ಸ್ಥಾಪನೆ<br>3. SCSP<br>4. TSP | 700.00<br>–<br>–<br>–<br>– | <br>25.00<br>400.00<br>200.00<br>75.00 |
| 8 | 3425–60–200–0–01<br>(104)(ಯೋಜನೇತರ) | ಭಾರತೀಯ ವಿಜ್ಞಾನ ಸಂಸ್ಥೆ ಬೆಂಗಳೂರು (ಅಂಶದಾನ) | 1.00 | |
| | | ಒಟ್ಟು ಮೊತ್ತ | 3661.00 | 3661.00 |

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್.ನಂ. 899

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಾಲೇಬೀರನಹಳ್ಳಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/6575, ದಿನಾಂಕ 14–12–2010.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆಯ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಾಲೇಬೀರನಹಳ್ಳಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ

ವಲಯ, ಬಿಜಾಪುರ ಇವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿವೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 16-01-1992.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ : 28-12-1994.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಚಿಂಚೋಳಿ ಸಿವಿಲ್ (ಹಿರಿಯ ವಿಭಾಗ), ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣವನ್ನು ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆ ರೂ. 63,000/-ಗಳನ್ನು ನಿಗದಿಪಡಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ ಆರ್‌ಡಿ 457 ಎಲ್‌ಸಿಜಿ 10, ದಿನಾಂಕ : 09-06-10ರಲ್ಲಿ ಅಭಿಪ್ರಾಯ ನೀಡಿದೆ ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಈ ಕೆಳಕಂಡಂತಿದೆ :

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ಸಾಲೀಬೀರನಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 67/06 | 208/1, 208/2 | 0-31 | 2,36,647-00 |
| **ಒಟ್ಟು** | | | | **2,36,647-00** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 09 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆಯ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಾಲೇಬೀರನಹಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು 67/06ರ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 2,36,619-00ಗಳನ್ನು (ಎರಡು ಲಕ್ಷದ ಮುವತ್ತಾರು ಸಾವಿರದ ಆರುನೂರ ಹತ್ತೊಂಭತ್ತು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19-03-2011 ರಲ್ಲಿ ಒದಗಿಸಿರುವ ಪೂರಕ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20-10-2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 900

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಸಚಿವಾಲಯ

**ವಿಷಯ :** ಟೆಲಿವಿಷನ್ ಕಲ್ಚರಲ್ ಮತ್ತು ಸ್ಪೋರ್ಟ್ ಕ್ಲಬ್ ಬೆಂಗಳೂರು ಇವರಿಗೆ ಸಹಾಯಾನುದಾನ ನೀಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ವಾರ್ತಾ ಇಲಾಖೆ ಇವರ ಪತ್ರ ಸಂಖ್ಯೆ ವಾಇ:ಚಚಿವಿ/2010-11/24797, ದಿನಾಂಕ: 22-03-2011

**ಪ್ರಸ್ತಾವನೆ:**

ಕಾರ್ಯದರ್ಶಿಗಳು, ಟೆಲಿವಿಷನ್ ಕಲ್ಚರಲ್ ಮತ್ತು ಸ್ಪೋರ್ಟ್ ಕ್ಲಬ್ ನಂ: 107/358/1.3ನೇ ಕ್ರಾಸ್, ಎಂ.ವಿ. ಸೀತಾರಾಮಯ್ಯ ರಸ್ತೆ, ಗವಿಪುರಂ ಎಕ್ಸ್‌ಟೆನ್‌ಷನ್, ಬೆಂಗಳೂರು ಇವರು ತಮಗೆ ಬೆಂಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಉತ್ತರಹಳ್ಳಿ ಬಡಾವಣೆಯಲ್ಲಿ 3767.40 ಚದರ ಮೀಟರ್ ಅಳತೆಯ ನಿವೇಶನವನ್ನು 30 ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಟೆಲಿವಿಷನ್ ಕಲ್ಚರಲ್ ಮತ್ತು ಸ್ಪೋರ್ಟ್ ಕ್ಲಬ್ ನಿರ್ಮಾಣಕ್ಕಾಗಿ ಮಂಜೂರು ಮಾಡಲಾಗಿದೆಯೆಂದು ಈ ನಿವೇಶನದಲ್ಲಿ ಕಟ್ಟಡ ನಿರ್ಮಾಣಕ್ಕಾಗಿ ಸರ್ಕಾರದ ವತಿಯಿಂದ ರೂ. 1.00 ಕೋಟಿಗಳನ್ನು ನೀಡಲು ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 22-08-2010ರಂದು ಗುದ್ದಲಿ ಪೂಜೆ ಮಾಡಿದ ಸಂದರ್ಭದಲ್ಲಿ ಭರವಸೆ ನೀಡಿರುವ ಹಿನ್ನೆಲೆಯಲ್ಲಿ ಈ ಸಂಸ್ಥೆಯ ಕಟ್ಟಡ ನಿರ್ಮಾಣಕ್ಕೆ ಅನುವಾಗುವಂತೆ ರೂ. 1.00 ಕೋಟಿಗಳನ್ನು ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ. ಹಾಗೂ ಈ ಕಟ್ಟಡದ ವಿನ್ಯಾಸ, ನೀಲಿ ನಕ್ಷೆ ಎಲ್ಲವನ್ನು ತಯಾರಿಸಿ, ನಿರ್ದೇಶಕರು, ವಾರ್ತಾ ಇಲಾಖೆ ಇವರಿಗೆ ಸಲ್ಲಿಸಿರುತ್ತಾರೆ.

ನಿರ್ದೇಶಕರು, ವಾರ್ತಾ ಇಲಾಖೆ ಇವರು ದಿನಾಂಕ: 22–03–2011ರ ಪತ್ರದಲ್ಲಿ ಮಾನ್ಯ ಮುಖ್ಯಮಂತ್ರಿಯವರು ನೀಡಿರುವ ಭರವಸೆಯಂತೆ ಸದರಿ ಸಂಸ್ಥೆಗೆ ಸಹಾಯಧನ ಒದಗಿಸಲು ಇಲಾಖೆಯಲ್ಲಿ ಉಳಿದಿರುವ ಅನುದಾನದ ವಿವರಗಳನ್ನು ಒದಗಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ: 59:ಪಿ.ಐ.ಎಫ್. 2010, ಬೆಂಗಳೂರು, ದಿನಾಂಕ 23–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಟೆಲಿವಿಷನ್ ಕಲ್ಚರಲ್ ಮತ್ತು ಸ್ಪೋರ್ಟ್ ಕ್ಲಬ್ ಬೆಂಗಳೂರು ಇವರಿಗೆ ಕಟ್ಟಡ ನಿರ್ಮಾಣಕ್ಕಾಗಿ ರೂ. 50.00 ಲಕ್ಷ (ರೂಪಾಯಿ ಐವತ್ತು ಲಕ್ಷಗಳು ಮಾತ್ರ) ಗಳನ್ನು ಹಣ ಬಳಕೆ ಪ್ರಮಾಣ ಪತ್ರ ಪಡೆಯುವ ಷರತ್ತಿಗೆ ಒಳಪಟ್ಟು ಕೆಳಕಂಡ ಯೋಜನೇತರ ಲೆಕ್ಕಶೀರ್ಷಿಕೆಯಡಿ ಉಳಿತಾಯವಾಗುವ ಅನುದಾನದಿಂದ ಭರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಲೆಕ್ಕಶೀರ್ಷಿಕೆ | ಮೊತ್ತ |
|---|---|
| 1. 2220–60–103–0–01 ವಾರ್ತಾ ಕೇಂದ್ರ 051 ಸಾಮಾನ್ಯ ವೆಚ್ಚ (ಯೋಜನೇತರ) | ರೂ. 35,00,000–00 |
| 2. 2220–60–800–0–012 ಪತ್ರಕರ್ತರ ಕಲ್ಯಾಣ ನಿಧಿ 059 ಇತರೆ ವೆಚ್ಚ (ಯೋಜನೇತರ) | ರೂ. 15,00,000–00 |
| ಒಟ್ಟು | ರೂ. 50,00,000–00 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್.ಡಿ.1 ಟಿ.ಎಫ್.ಪಿ. 2008, ದಿನಾಂಕ: 16–05–08ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ವಿ. ರಾಮಚಂದ್ರರಾವ್**

ಪಿ.ಆರ್. 936

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯ ಪ್ರದೇಶದ ಪರಿಷ್ಕೃತ ಕರಡು ರಚನಾ ನಕ್ಷೆ–2031ಕ್ಕೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ:ನಅಇ 51 ಬಿಎಂಆರ್ 2002, ದಿನಾಂಕ: 21–9–2005.

2) ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಇವರ ಪತ್ರ ಸಂಖ್ಯೆ: ಬಿ.ಎಂಆರ್‌ಡಿಎ/ಟಿಪಿ/ಎಸ್‌ಟಿಆರ್‌ಪ್ಲಾನ್/ 18/2007–08, ದಿನಾಂಕ: 21–6–2010 ಮತ್ತು 12–8–2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 21–9–2005ರ ಆದೇಶದಲ್ಲಿ ಸರ್ಕಾರವು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಪ್ರದೇಶದ ವ್ಯಾಪ್ತಿಯ ಯೋಜಿತ ಬೆಳವಣಿಗೆಗಾಗಿ **"ರಚನಾ ನಕ್ಷೆಗೆ"** ಅನುಮೋದನೆ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 21–6–2010 ಮತ್ತು 12–8–2010ರ ಪತ್ರಗಳಲ್ಲಿ ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯು ಶೀಘ್ರಗತಿಯಲ್ಲಿ ಬೆಳವಣಿಗೆ ಹೊಂದುತ್ತಿರುವುದರಿಂದ, ಸದರಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಿಗೆ ರಚನಾ ನಕ್ಷೆಯನ್ನು ತಯಾರಿಸುವ ಕಾರ್ಯವನ್ನು ಮೇ:ಗ್ರೂಪ್ ಎಸ್‌ಸಿಇ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಇವರಿಗೆ ವಹಿಸಲಾಗಿತ್ತೆಂದು, ಸದರಿ ಸಂಸ್ಥೆಯವರು ತಯಾರಿಸಿರುವ ಪರಿಷ್ಕೃತ ನಕ್ಷೆ ಮೇಲೆ ಒಂದು ನಿರೂಪಣೆಯನ್ನು ಏರ್ಪಡಿಸಿ, ಸಂಬಂಧಪಟ್ಟ ಇಲಾಖೆಗಳಿಂದ ಸಲಹೆ/ಸೂಚನೆಗಳನ್ನು ಆಹ್ವಾನಿಸಿ ಈ ಸಲಹೆ/ಸೂಚನೆಗಳನ್ನು ಹಾಗೂ ಅಬೈಡ್ ಸಮಿತಿಯು ಶಿಫಾರಸ್ಸು ಮಾಡಿರುವ ಸಲಹೆ/ಸೂಚನೆಗಳನ್ನು ಅಳವಡಿಸಿ, ಮತ್ತು ಕರಡು ರಚನಾ ನಕ್ಷೆಯಲ್ಲಿ ವ್ಯವಸಾಯ ವಲಯದಲ್ಲಿ ಅನುಮತಿಸಬಹುದಾದ ಉಪಯೋಗಗಳಲ್ಲಿ "Eco friendly/Heritage Tourist Resorts with zero discharge approved by Tourism Department" ಇವುಗಳನ್ನು ಅಳವಡಿಸಿಕೊಂಡು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಯೋಜಿತ ಬೆಳವಣಿಗೆಯ ದೃಷ್ಟಿಯಿಂದ ಪರಿಷ್ಕೃತ ಕರಡು ರಚನಾ ನಕ್ಷೆ–2031ಕ್ಕೆ ಮಂಜೂರಾತಿ ನೀಡಲು ಸರ್ಕಾರವನ್ನು ಕೋರಿರುತ್ತಾರೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 204 ಬಿಎಂಆರ್ 2010, ಬೆಂಗಳೂರು, ದಿನಾಂಕ 24–2–2011**

ಪ್ರಸ್ತಾವನೆಯಲ್ಲಿ ಹೇಳಿರುವ ಅಂಶಗಳನ್ನು ಪರಿಗಣಿಸಿ, ಬೆಂಗಳೂರು ಮಹಾನಗರ ಪ್ರದೇಶದ ಯೋಜಿತ ಬೆಳವಣಿಗೆಗಾಗಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ಸಿದ್ಧಪಡಿಸಿರುವ ಕರಡು ರಚನಾ ನಕ್ಷೆ–2031ಕ್ಕೆ ವ್ಯವಸಾಯ ವಲಯದಲ್ಲಿ ಅನುಮತಿಸಬಹುದಾದ ಉಪಯೋಗಗಳಲ್ಲಿ "Eco friendly/Heritage Tourist Resorts with zero discharge approved by Tourism Department" ಇವುಗಳನ್ನು ಅಳವಡಿಸಿಕೊಳ್ಳುವ ನಿಬಂಧನೆಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ. ಅಲ್ಲದೆ, ಸಾರ್ವಜನಿಕರಿಗಾಗಿ ಈ ಪ್ರಸ್ತುತ ಕರಡು ರಚನಾ ನಕ್ಷೆಯನ್ನು ಪ್ರಕಟಿಸಿ, 30 ದಿನಗಳ ಕಾಲಾವಕಾಶ ನೀಡಿ ಆಕ್ಷೇಪಣೆ/ಸಲಹೆಗಳನ್ನು ಆಹ್ವಾನಿಸಿ ಜಾಹೀರಾತು ನೀಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಪ್ರೇಮಚಂದ್ರ**

ಪಿ.ಆರ್. 937

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಅಮಾನಿ ಬೆಳ್ಳಂದೂರು ಖಾನೆ ಗ್ರಾಮದ ಸ.ನಂ. 173 ರಿಂದ 207 ರಲ್ಲಿನ 2 ಎಕರೆ 13 ಗುಂಟೆ ಕಾಲು ದಾರಿ ಮತ್ತು ಕಾಲುವೆ ಬಿ ಖರಾಬ್ ಜಮೀನುಗಳನ್ನು ಶ್ರೀ ಎಸ್.ಆರ್. ನಾಗರಾಜ್ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಶ್ರೀ ಎಸ್.ಆರ್. ನಾಗರಾಜ್ ಇವರು ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಸಲ್ಲಿಸಿದ ಮನವಿ.
2) ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್ಎನ್‌ಡಿ (ಪೂ) ಸಿಆರ್ 142/2008-09, ದಿ: 09.01.2009.
3) ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 120 ಎಲ್‌ಜಿಬಿ 2009, ದಿ: 23.12.2009
4) ಸರ್ಕಾರದ ಕಾರ್ಯದರ್ಶಿ, ಕಂದಾಯ ಹಾಗೂ ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ಇವರ ಪತ್ರದ ದಿ: 05.03.2010.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ನಾಗರಾಜ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಪತ್ರದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಅಮಾನಿ ಬೆಳ್ಳಂದೂರು ಖಾನೆ ಗ್ರಾಮದ ಸ.ನಂ. 173 ರಿಂದ 207ರ ಜಮೀನುಗಳಲ್ಲಿ ಹಾದು ಹೋಗುತ್ತಿರುವ ಕಾಲು ದಾರಿ ಮತ್ತು ಕಾಲುವೆ ಬಿ ಖರಾಬ್ ಜಮೀನುಗಳನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

2) ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಪತ್ರದ ದಿ:09.01.2009ರಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಅಮಾನಿ ಬೆಳ್ಳಂದೂರು ಖಾನೆ ಗ್ರಾಮದ ಸ.ನಂ. 173 ರಿಂದ 207ರ ಮಧ್ಯೆ ಹಾದು ಹೋಗುವ ಹದ್ದುಗಿಡದ ಓಣಿ, ಕಾಲುವೆ, ಬಿ ಖರಾಬ್ ಜಮೀನುಗಳ ಸುತ್ತಮುತ್ತಲಿನ ಪ್ರದೇಶಗಳು ವ್ಯವಸಾಯೇತರ ಉದ್ದೇಶಕ್ಕೆ ಬಳಸಿಕೊಂಡಿರುವುದರಿಂದ ಅಭಿವೃದ್ಧಿ ಹೊಂದಿದ್ದು, ಕಾಲುವೆ ಮತ್ತು ಹಳ್ಳ ತನ್ನ ಸ್ವರೂಪವನ್ನು ಕಳೆದುಕೊಂಡಿರುತ್ತದೆ ಎಂದು ವರದಿ ಮಾಡಿರುತ್ತಾರೆ.

3) ಸದರಿ ಬಿ ಖರಾಬ್ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಬೇಕಾಗಿರುವುದಿಲ್ಲವೆಂದು ತಿಳಿಸಿ, ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ 68(1)ರನ್ವಯ ದಿ: 15.06.2009ರಂದು ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ಇವರು ನಮೂನೆ 27ರಲ್ಲಿ ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸಿರುತ್ತಾರೆ. ಸದರಿ ಸಾರ್ವಜನಿಕ ಪ್ರಕಟಣೆಗೆ ಅನುಗುಣವಾಗಿ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಸರ್ಕಾರದ ಅಧಿಸೂಚನೆ ದಿ: 23.12.2009ರಲ್ಲಿ ಸದರಿ ಹದ್ದುಗಿಡದ ಹಳ್ಳ, ಕಾಲುದಾರಿ ಮತ್ತು ಕಾಲುವೆ ಬಿ ಖರಾಬ್ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ನಮೂನೆ 29ರಲ್ಲಿ ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆ.

4) ಸರ್ಕಾರದ ಕಾರ್ಯದರ್ಶಿ, ಕಂದಾಯ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿನ ಪತ್ರದ ದಿ: 05.03.2010ರಲ್ಲಿ ಸದರಿ ಕಾಲುದಾರಿಯ ಸ್ಥಳ ಪರಿಶೀಲನೆ ಮಾಡಿ ಸಾರ್ವಜನಿಕ ಉಪಯೋಗದಲ್ಲಿ ಇಲ್ಲದಿದ್ದಲ್ಲಿ ಮತ್ತು ಸಾರ್ವಜನಿಕ ಉಪಯೋಗಕ್ಕೆ ಅವಶ್ಯಕತೆ ಇಲ್ಲದಿದ್ದಲ್ಲಿ ಕಾಲುದಾರಿಯನ್ನು ಸಾರ್ವಜನಿಕ ಉಪಯೋಗದಿಂದ ವಿಹಿತಗೊಳಿಸಬಹುದಾಗಿದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಅಮಾನಿ ಬೆಳ್ಳಂದೂರು ಖಾನೆ ಗ್ರಾಮದ ಸ.ನಂ. 173 ರಿಂದ 207 ರವರೆಗಿನ ಜಮೀನುಗಳಲ್ಲಿ ಹಾದು ಹೋಗುವ ಕಾಲುದಾರಿ ಮತ್ತು ಕಾಲುವೆ ಬಿ ಖರಾಬ್ ಜಮೀನುಗಳು ನಿಗದಿ ಪಡಿಸಿದ ಉದ್ದೇಶಕ್ಕಾಗಿ ಬಳಕೆಯಾಗುತ್ತಿಲ್ಲವೆಂದು ಜಿಲ್ಲಾಧಿಕಾರಿಗಳು ವರದಿ ನೀಡಿದ ಹಿನ್ನೆಲೆಯಲ್ಲಿ ಸದರಿ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ 68ರ ಅಡಿಯಲ್ಲಿ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಅಧಿಸೂಚನೆ ಹೊರಡಿಸಲಾಗಿರುತ್ತದೆ.

5) ಸದರಿ ಬಿ ಖರಾಬ್ ಜಮೀನುಗಳನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲಾಗಿರುವುದರಿಂದ ಶ್ರೀ ಎಸ್.ಆರ್. ನಾಗರಾಜ್ ಇವರಿಗೆ ಮಂಜೂರು ಮಾಡುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 120 ಎಲ್‌ಜಿಬಿ 2009, ಬೆಂಗಳೂರು, ದಿನಾಂಕ 23-03-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಲ್ಲಿನ ಅಧಿಕಾರವನ್ನು ಚಲಾಯಿಸಿ ನಿಯಮ 10(2)ನ್ನು ಸಡಿಲಿಸಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಅಮಾನಿ ಬೆಳ್ಳಂದೂರು ಖಾನೆ ಗ್ರಾಮದ ಸ.ನಂ. 173 ರಿಂದ 207 ರವರೆಗಿನ 2 ಎಕರೆ 12 ಗುಂಟೆ ಜಮೀನನ್ನು ಶ್ರೀ ಎಸ್. ಆರ್. ನಾಗರಾಜ್ ಇವರಿಗೆ ಪ್ರಸಕ್ತ ಪೂರ್ಣ ಮಾರುಕಟ್ಟೆ ದರ ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 72 ವೆಚ್ಚ-7/2010, ದಿ: 03.02.2010ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೀತಾ ರಮೇಶ್**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ ಮತ್ತು ಭೂ ಕಂ)

ಪಿ.ಆರ್. 938

ಕಂದಾಯ ಸಚಿವಾಲಯ

**ವಿಷಯ :** ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿಯಲ್ಲಿ ಕುಡಿಯುವ ನೀರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ:**

ರಾಮನಗರ ಜಿಲ್ಲೆಯಲ್ಲಿ ಕುಡಿಯುವ ನೀರಿನ ಸಮಸ್ಯೆ ಉದ್ಭವಿಸಿದ್ದು, ಅದಕ್ಕಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿಯಲ್ಲಿ ಅನುದಾನ ಬಿಡುಗಡೆ ಮಾಡುವುದು ಅವಶ್ಯಕವಾಗಿರುತ್ತದೆ. ಆದುದರಿಂದ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 59 ಟಿಎನ್‌ಆರ್ 2011, ಬೆಂಗಳೂರು, ದಿನಾಂಕ 24–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಮನಗರ ಜಿಲ್ಲೆಯಲ್ಲಿ ಕುಡಿಯುವ ನೀರಿಗಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿಯಲ್ಲಿ ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ ಇವರಿಗೆ ರೂ. 100 ಲಕ್ಷ (ರೂಪಾಯಿ ನೂರು ಲಕ್ಷಗಳು ಮಾತ್ರ) ಗಳನ್ನು ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ಮಾರ್ಗಸೂಚಿಗಳನ್ವಯ ಉಪಯೋಗಿಸಿಕೊಳ್ಳತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ, ಮೇಲು ರುಜು ಮಾಡಿ, ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್ ಪಿಡಿ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸಿಕೊಳ್ಳತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–104–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿಯ ಸಂಖ್ಯೆ:ಆಇ:177:ವೆಚ್ಚ–7/2011, ದಿನಾಂಕ: 19–03–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 939

**ಎಂ.ಎಸ್. ದೇಸಾಯಿ**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ)

**ಕಂದಾಯ ಸಚಿವಾಲಯ**

**ಸೇರ್ಪಡೆ ಆದೇಶ**

**ಸಂಖ್ಯೆ: ಆರ್‌ಡಿ 22 ಎಲ್‌ಜಿಒ 2011, ಬೆಂಗಳೂರು, ದಿನಾಂಕ 23–03–2011**

ಕೊಡಗು ಜಿಲ್ಲೆ, ಮಡಿಕೇರಿ ತಾಲ್ಲೂಕು, ಕೆ. ನಿಡುಗಣೆ ಗ್ರಾಮದ ಸ.ನಂ.1/11ರಲ್ಲಿ 4.60 ಎಕರೆ ಜಮೀನನ್ನು ಕೇಂದ್ರೀಯ ವಿದ್ಯಾಲಯಕ್ಕೆ ಮಂಜೂರು ಮಾಡಲಾದ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 46 ಎಲ್‌ಜಿಒ 2010, ದಿ: 01.03.2011ರ ಆದೇಶ ಭಾಗದಲ್ಲಿ ಷರತ್ತನ್ನು ವಿಧಿಸಿ ಎಂಬ ಪದಗಳ ನಂತರ "ಉಚಿತವಾಗಿ" ಎಂಬ ಪದವನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೀತಾ ರಮೇಶ್**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ
(ಭೂ.ಮಂ ಮತ್ತು ಭೂ ಕಂ)

ಪಿ.ಆರ್. 940

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿನ ಶಾಖಾಧಿಕಾರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ ವೃಂದಕ್ಕೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಟಿಪ್ಪಣಿ ಸಂಖ್ಯೆ ಮುಕಾ 1287/ಕಂಪ್ಯೂಟರ್/2011, ದಿನಾಂಕ: 2–2–2011

**ಪ್ರಸ್ತಾವನೆ:**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಮುಖ್ಯಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿನ ಒಂದು ಶಾಖಾಧಿಕಾರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ ವೃಂದಕ್ಕೆ ಉನ್ನತೀಕರಿಸುವಂತೆ ಕೋರಲಾಗಿದೆ.

ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿನ ಹಿರಿಯ ಸಹಾಯಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನೌಕರರಿಗೆ ಶಾಖಾಧಿಕಾರಿ ಹುದ್ದೆಗೆ ಮುಂಬಡ್ತಿ ದೊರೆತ ನಂತರ ಹಿರಿಯ ಸಹಾಯಕರ ಹುದ್ದೆಯನ್ನು ತಾತ್ಕಾಲಿಕವಾಗಿ, ಅಧಿಕಾರಿಯು ಶಾಖಾಧಿಕಾರಿ ಹುದ್ದೆಯಲ್ಲಿ ಮುಂದುವರೆಯುವವರೆಗೆ ಉನ್ನತೀಕರಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 124 ಸಅಸೇ 2011, ಬೆಂಗಳೂರು, ದಿನಾಂಕ 23–03–2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮುಖ್ಯಕಾರ್ಯದರ್ಶಿಯವರ ಆಪ್ತ ಶಾಖೆಗೆ ಮಂಜೂರಾಗಿರುವ ಹಿರಿಯ ಸಹಾಯಕರ (ತಾತ್ಕಾಲಿಕವಾಗಿ ಶಾಖಾಧಿಕಾರಿ ವೃಂದಕ್ಕೆ ಉನ್ನತೀಕರಿಸಲಾದ) ಹುದ್ದೆಯನ್ನು ನಿಲಂಬನೆಯಲ್ಲಿಟ್ಟು (Abeyance) ತಕ್ಷಣದಿಂದ ಜಾರಿಗೆ ಬರುವಂತೆ

ಹಾಗೂ ಒಂದು ವರ್ಷದ ಅವಧಿಗೆ ಅಥವಾ ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಯ ಸೇವೆಯು ಮುಖ್ಯ ಕಾರ್ಯದರ್ಶಿಯವರ ಆಪ್ತಶಾಖೆಗೆ ಅಗತ್ಯವಿರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಒಂದು ಅಧೀನ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 272:ಸೇವೆಗಳು–3/2011, ದಿನಾಂಕ: 11–3–2011ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 941

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು. ಇಲಾಖೆ (ಸೇವೆಗಳು–3)

## DEPARTMENT OF PERSONNEL AND ADMINISTRATIVE REFORMS SECRETARIAT

**Sub:** Suspension of Sri. K.M. Narayanaswamy, IFS (KN-96) Deputy conservator of Forests, Kollegal Division, Kollegal-Issue of orders-reg.

Read:
1. Letter No. A1/IFS/CR-53/2010-11, dated : 21-03-2011 of PCCF (HOFF).
2. Letter No. LOK/INV(G)/M-19/CR-5/CMR, dated : 21-03-2011 from Karnataka Lokayukta, Bangalore.
3. Letter No. A1/IFS/CR-53/2010-11, dated : 25-03-2011 PCCF (HOFF).

**Government Order No.: DPAR 23 SFP 2011, Bangalore, Dated: 29-03-2011**

Whereas, the ADGP, Karnataka Lokayukta, Bangalore in his letter dated : 21-03-2011 read at Sl.No. 2 above has reported that on the basis of reliable sources that illegal money collected from contractors was being transported to Bangalore, Sri K.M. Narayanaswamy, IFS, Deputy Conservator of Forests, Kollegal Division, Kollegal was intercepted on his way to Bangalore from Kollegal on 20-03-2011 in Government Vehicle No. KA-10 G-335. When searched in presence of panchas unaccounted money in Indian currency amounting to Rs. 8 lakh rupees was found in a brief case in the vehicle and the officer could not give proper and convincing information as to source of the money he had in his vehicle. A case was registered in Chamarajanagar Lokayukta Police Station, Crime No. 05/2011 u/s 7, 13(1)(d) r/w 13(2) of Prevention of Corruption Act, 1988 on 20-03-2011 and took up the investigation. On the same day the Accused Officer was produced before the Principal District Session and Special Court, Chamarajanagar and the court ordered him to judicial custody till 30-03-2011.

2. Whereas, ADGP, Lokayukta in his letter dated : 21-03-2011 has apprehended that continuing the officer in his present office would prejudice the investigation and there is possibility of the Accused Officer interfering in the investigation process and may tamper the evidences. The ADGP has therefore sought Government's Order for placing the Accused Officer under suspension and to transfer his lien to other place.

3. The Principal Chief Conservator of Forests vide letter dated : 25-03-2011 has informed that the Accused Officer is released from judicial custody on bail on 22-03-2011.

4. Whereas, the Government has examined the report of ADGP, Lokayukta, in the light of relevant rules and Government of India's guidelines. The Government is satisfied that it is necessary to place Sri. K.M. Narayanaswamy, IFS (KN-96) under suspension with immediate effect in the interest of smooth completion of investigation by Lokayukta Police.

5. Now, therefore in exercise of the powers conferred under Sub rule 3 of Rule (3) of the All India Services (Discipline & Appeal) Rules, 1969 and as per Government of India guidelines dated : 10-09-1993, Sri K.M. Narayanaswamy, IFS (KN-96), Deputy Conservator of Forests, Kollegal Division, Kollegal, Chamarajanagar District is placed under suspension with immediate effect and until further orders pending further investigation by Karnataka Lokayukta Police and pending the question of initiating Departmental Disciplinary/Criminal proceedings thereon.

6. During the period of suspension, the officer shall be paid subsistence allowance in accordance with Rule 4 of All India Services (Discipline & Appeal) Rules, 1969.

7. During the period of suspension, the officer shall not leave the headquarters under any circumstances without the written permission of the State Government.

By order and in the name of the Governor of Karnataka

PR No. 942

**Ashok P. Atre**

Under Secretary to Government

DPAR (Services-4)

## DEPARTMENT OF PERSONNEL AND ADMINISTRATIVE REFORMS SECRETARIAT

**Sub:** Deputation of officers to Bangor University, UK-issue of orders - reg.

Read:
1. Government Order No. DPAR 227 SME 2010, dated 19-02-2011 r/w corrigendum dated : 18-03-2011.
2. Letter No. A1/EST/CR-53/2010-11, dated 21-03-2011 of Principal Chief Conservator of Forests, Bangalore.
3. Letter dated 21-03-2011 of the Additional Director General of Police, Karnataka Lokayukta, Bangalore.

**Preamble:**

In Government Order dated 19-02-2011 r/w corrigendum dated 18-03-2011 read at (1) above, among others Sri K.M. Narayanaswamy, IFS, Deputy Conservator of Forests, Kollegal Division, Kollegal was deputed for the training course on "Forestry and Climate Change" at Bangor University, UK from 04-04-2011 to 03-06-2011.

The Principal Chief Conservator of Forests, Bangalore, in his letter dated 21-03-2011 read at (2) above has stated that the Karnataka Lokayukta officers have arrested Sri K.M. Narayanaswamy, IFS on 20-03-2011 and produced him before the District and Session Court, Chamarajanagar, for further investigation in the matter of the officer found carrying unaccounted money of Rs. 8.00 lakhs in his department vehicle on 20-03-2011. In the above circumstances the Principal Chief Conservator of Forests has requested to review the question of deputation of Sri K.M.Narayanaswamy, IFS for the above training abroad. In the meanwhile, the Additional Director General of Police, Karnataka Lokayukta, Bangalore in his letter dated 21-03-2011 has reported that a case under the P.C. Act has been registered against Sri K.M.Narayanaswamy and the investigation is going on.

In view of the above circumstances, it is considered necessary to cancel the deputation of Sri K .M. Narayanaswamy, IFS to the training course in United Kingdom.

**Government Order No.: DPAR 227 SME 2010, Bangalore, Dated: 26-03-2011**

In the circumstances explained in the preamble, the order of deputation of Sri K.M.Narayanaswamy IFS, to the training course on “Forestry and Climate Change at Bangor University, United Kingdom, from 04-04-2011 to 03-06-2011 vide Government order read at Sl.No. 1 is withdrawn and stands cancelled.

The State Government order read at (1) above shall continue to remain without change in respect of deputation of other 04 officer mentioned in the said Government order.

By order and in the name of the Governor of Karnataka

PR No. 943

**Ashok P. Atre**

Under Secretary to Government (i/c)

DPAR (Services-1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಗೌರವಧನದ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ Law Clerks-cum-Research Assistants ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 29 ಸೇಉನ್ಯಾ 2006 ದಿನಾಂಕ : 12–04–2006.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 84 ಸೇಉನ್ಯಾ 2006 ದಿನಾಂಕ : 25–01–2007.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 9 ಸೇಉನ್ಯಾ 2008 ದಿನಾಂಕ : 05–02–2008.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 2 ಸೇಉನ್ಯಾ 2009 ದಿನಾಂಕ : 09–02–2009.
5. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಅವರ ಪತ್ರ ಸಂಖ್ಯೆ : HCE 623/2006 dated : 14-01-2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ : 12–04–2006ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಕಾನೂನು ಪದವೀಧರರನ್ನು ರೂ. 6000–00 ಗಳ ಮಾಸಿಕ ಗೌರವಧನದ ಆಧಾರದ ಮೇಲೆ Law Clerks-cum-Research Assistants ಗಳಾಗಿ 1 ವರ್ಷದ ಅವಧಿಗೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ಆನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ : 25–01–2007ರ ಸರ್ಕಾರಿ ಆದೇಶದಲ್ಲಿ ಸದರಿ ಗೌರವಧನವನ್ನು ರೂ. 10,000–00 ಗಳಿಗೆ ಹೆಚ್ಚಿಸಲಾಗಿತ್ತು. ಸದರಿ ಹುದ್ದೆಗಳನ್ನು ಮೇಲೆ (3)ರಲ್ಲಿ ಓದಲಾದ ದಿನಾಂಕ : 05–02–2008ರ ಸರ್ಕಾರಿ ಆದೇಶದಲ್ಲಿ ದಿನಾಂಕ : 01–02–2008 ರಿಂದ 1 ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ಈಗ ತದನಂತರ ಸದರಿ ಹುದ್ದೆಗಳನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ : 09–02–2009ರ ಸರ್ಕಾರಿ ಆದೇಶದಲ್ಲಿ ದಿನಾಂಕ : 01–02–2009 ರಿಂದ 31–01–2010ರ ವರೆಗೆ ಮುಂದುವರೆಸಲಗಿತ್ತು. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ : 14–01–2011ರ ಪತ್ರದಲ್ಲಿ ಸದರಿ ಹುದ್ದೆಗಳನ್ನು ಮುಂದಿನ ಎರಡು ವರ್ಷಗಳಿಗೆ ಮುಂದುವರೆಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 3 ಸೇಉನ್ಯಾ 2011, ಬೆಂಗಳೂರು, ದಿನಾಂಕ: 25ನೇ ಮಾರ್ಚ್–2011**

ಕರ್ನಾಟಕ ಉಚ್ಚ ನ್ಯಾಯಾಲಯದ Law Clerks-cum-Research Assistants 41 ಹುದ್ದೆಗಳನ್ನು ದಿನಾಂಕ : 01–02–2011 ರಿಂದ ದಿನಾಂಕ : 31–01–2012ರ ವರೆಗೆ ವಿಸ್ತರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 162 ವೆಚ್ಚ–12/2011 ದಿನಾಂಕ : 08–03–2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿಆರ್.ನಂ. 944

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–3)

## ಒಳಾಡಳಿತ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ತಾಲ್ಲೂಕಿನ ಶ್ರೀ ಗುರು ದತ್ತಾತ್ರೇಯ ಬಾಬಾ ಬುಡನ್‌ಸ್ವಾಮಿ ದರ್ಗಾದಲ್ಲಿ ದಿನಾಂಕ : 26–03–2011 ರಿಂದ 28–03–2011ರ ವರೆಗೆ ನಡೆಸುವ ಉರುಸ್ ಕಾರ್ಯಕ್ರಮಕ್ಕೆ 3 ಜನ ವಿಶೇಷ ಕಾರ್ಯ ನಿರ್ವಾಹಕ ದಂಡಾಧಿಕಾರಿಗಳನ್ನು ನಿಯೋಜಿಸಿದ್ದಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ ಮತ್ತು ಜಿಲ್ಲಾ ದಂಡಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಇವರ ಪ್ರಸ್ತಾವನೆ ಸಂಖ್ಯೆ : ಜೆ1/ಎಂಎಎಜಿ/139 2010–11, ದಿನಾಂಕ : 22–03–2011.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿ ಮತ್ತು ಜಿಲ್ಲಾ ದಂಡಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರು ಚಿಕ್ಕಮಗಳೂರು ತಾಲ್ಲೂಕಿನ ಶ್ರೀ ಗುರು ದತ್ತಾತ್ರೇಯ ಬಾಬಾ ಬುಡನ್‌ಸ್ವಾಮಿ ದರ್ಗಾದಲ್ಲಿ ದಿನಾಂಕ : 26–03–2011 ರಿಂದ 28–03–2011 ರವರೆಗೆ ನಡೆಸುವ ಉರುಸ್ ಕಾರ್ಯಕ್ರಮಕ್ಕೆ 3 ಜನ ವಿಶೇಷ ಕಾರ್ಯ ನಿರ್ವಾಹಕ ದಂಡಾಧಿಕಾರಿಗಳನ್ನು ನಿಯೋಜಿಸಿದ್ದಕ್ಕೆ ಸಂಬಂಧಿಸಿದಂತೆ ಸರ್ಕಾರದಿಂದ ಘಟನೋತ್ತರ ಅನುಮೋದನೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : 161 ಎಸ್‌ಎಸ್‌ಟಿ 2011, ಬೆಂಗಳೂರು, ದಿನಾಂಕ: 26–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಮಗಳೂರು ತಾಲ್ಲೂಕಿನ ಶ್ರೀ ಗುರು ದತ್ತಾತ್ರೇಯ ಬಾಬಾ ಬುಡನ್‌ಸ್ವಾಮಿ ದರ್ಗಾದಲ್ಲಿ ದಿನಾಂಕ : 26–03–2011ರಿಂದ 28–03–2011ರ ವರೆಗೆ ನಡೆಸುವ ಉರುಸ್ ಕಾರ್ಯಕ್ರಮಕ್ಕೆ ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ, ಚಿಕ್ಕಮಗಳೂರು ಜಿಲ್ಲಾ ದಂಡಾಧಿಕಾರಿಗಳು 3 ಜನ ವಿಶೇಷ ಕಾರ್ಯ ನಿರ್ವಾಹಕ ದಂಡಾಧಿಕಾರಿಗಳನ್ನು ನಿಯೋಜಿಸಿ ಹೊರಡಿಸಿರುವ ದಿನಾಂಕ : 22–03–2011ರ ಆದೇಶಕ್ಕೆ ಸರ್ಕಾರವು ಘಟನೋತ್ತರ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ,
ಕಾಪಿಪೋಸಾ ಮತ್ತು ಅಭಿಯೋಗಗಳು)

ಪಿಆರ್.ನಂ. 945

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** 2011–12ನೇ ಸಾಲಿಗೆ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಮುಂದುವರೆದ ಯೋಜನೆಗಳಿಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ದಿನಾಂಕ : 21–04–2010ರ ಆದೇಶ ಸಂಖ್ಯೆ : ಮೂಅಇ 38 ಮೂಇವಿ 2010.

**ಪ್ರಸ್ತಾವನೆ:**

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ರಚನೆಯ ಉದ್ದೇಶವು ಸಚಿವಾಲಯದ ಮಟ್ಟದಲ್ಲಿ ರೂ. 100 ಕೋಟಿಗಳಿಗೂ ಮೀರಿದ ಮೆಗಾ ಯೋಜನೆಗಳ ರೂಪಿಸುವಿಕೆ/ಪಿಪಿಪಿ ಯೋಜನೆಗಳ ಅನುಷ್ಠಾನ ಹಾಗೂ ಸಮನ್ವೀಕರಣ ಮಾಡುವುದಾಗಿರುತ್ತದೆ. ಈ ಇಲಾಖೆಯಲ್ಲಿ ಪ್ರಧಾನವಾಗಿ ಕಾರ್ಯಗತಗೊಳಿಸುತ್ತಿರುವ ಯೋಜನೆಗಳಾದ ವಿಮಾನ ನಿಲ್ದಾಣ, ಇಳಿದಾಣ/ಹೆಲಿಪ್ಯಾಡ್ ನಿರ್ಮಾಣ ಯೋಜನೆ, ವೆಚ್ಚ ಹಂಚಿಕೆ ಆಧಾರದ ಮೇಲೆ ಕೈಗೆತ್ತಿಕೊಂಡಿರುವ ರೈಲ್ವೆ ಯೋಜನೆಗಳು, ರಸ್ತೆ ಮೇಲು ಸೇತುವೆ/ಕೆಳಸೇತುವೆ ಯೋಜನೆಗಳು/HSRL/VADA/ಬಂದರು ನಿರ್ಮಾಣ ಅನಿಲಕೊಳವೆ ಯೋಜನೆ ಮುಂತಾದವುಗಳಿಗೆ 2011–12ನೇ ಸಾಲಿನ ಆಯವ್ಯಯದಲ್ಲಿ ಅವಕಾಶ ಕಲ್ಪಿಸಲಾಗಿದೆ.

2. 2010–11ನೇ ಸಾಲಿಗೆ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ 22 ಯೋಜನೆಗಳನ್ನು ಮುಂದುವರೆದ ಯೋಜನೆಗಳೆಂದು ಪರಿಗಣಿಸಿ ಮೇಲೆ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. 2011–12ನೇ ಸಾಲಿನಲ್ಲಿ ಮೇಲಿನ 24 ಯೋಜನೆಗಳೊಂದಿಗೆ ಇನ್ನೂ 6 ಹೊಸ ಯೋಜನೆಗಳನ್ನು ಸೇರಿಸಲಾಗಿದೆ. ಈ 6 ಯೋಜನೆಗಳನ್ನು ಹೊರತುಪಡಿಸಿ ಉಳಿದ 24 ಯೋಜನೆಗಳಲ್ಲಿ ಯಾವುದೇ ಬದಲಾವಣೆ ಇಲ್ಲದಿರುವುದರಿಂದ ಈ ಎಲ್ಲಾ ಯೋಜನೆಗಳನ್ನು ಮುಂದುವರಿದ ಯೋಜನೆಗಳೆಂದು ಪರಿಗಣಿಸಲು ದಿನಾಂಕ : 26–03–2011 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಮುಂದುವರೆದ ಯೋಜನೆಗಳನ್ನು ಮುಂದುವರೆಸುವ ಕುರಿತಂತೆ ಜರುಗಿದ ಸಭೆಯಲ್ಲಿ ತೀರ್ಮಾನಿಸಿದೆ.

3. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 82 ಮೂಇವಿ 2011, ಬೆಂಗಳೂರು, ದಿನಾಂಕ: 28–03–2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಲ್ಲಿ 2011–12ನೇ ಹಣಕಾಸಿನ ವರ್ಷದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಈ ಕೆಳಕಂಡ 24 ಯೋಜನೆಗಳನ್ನು ಮುಂದುವರೆದ ಯೋಜನೆಗಳೆಂದು ಪರಿಗಣಿಸಿ ಇವುಗಳ ಅನುಷ್ಠಾನಕ್ಕೆ ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಿದೆ.

(Rs. in Lakhs)

| Sl. No. | Nomenclature of the Scheme | Budget provision during 2010-11 | Budget provision during 2011-12 |
|---|---|---|---|
| 1. | 5465-01-190-1-04-240 BIAP-Assistance for repayment of HUDCO loan. | 2599.00 | 1463.00 |
| 2a) | 5465-01-190-1-05-211- Development of Minor Airports Investments. | 4000.00 | 8000.00 |
| 2b) | 5465-01-190-1-05-133- Special Development Plan. | 6000.00 | 4000.00 |
| 3 | 5465-01-190-2-01 Investment in BIAL through KSIIDC. | 1500.00 | 10.00 |
| 4 | 5465-01-190-2-03 KSIIDC-BIAP cell-211-Investments. | 25.00 | 25.00 |
| 5 | 5465-01-190-2-04-211 Providing power at the airport near BIAP site. | 1.00 | 1.00 |
| 6a) | 5465-01-190-2-05-211 Alternate Roads Investment. | 1500.00 | 1000.00 |
| 6b) | 5465-01-190-2-05-422-Special Component Plan. | 350.00 | 350.00 |
| 6c) | 5465-01-190-2-05-423-Tribal Sub Plan. | 150.00 | 150.00 |
| 7. | 5465-01-190-2-06 Land acquisition for Trumpet Interchange investments. | 200.00 | - |
| 8. | 5465-01-190-2-07-051-Development of 408 acres of Govt. land adjacent to BIAP. | 100.00 | 100.00 |
| 9. | 5465-01-190-2-11 - Aviation Turbine Fuel - Tax Reimbursement Investment. | 36.00 | 1.00 |
| 10. | 5465-01-190-3-06-211 Rail link to New Airport. | 570.00 | 7570.00 |
| 11. | 5465-01-190-3-01- KRIDE- Investment. | 500.00 | 1.00 |
| 12. | 5465-01-190-3-02-Hassan-Mangalore guage conversion project-Investments. | 900.00 | 100.00 |
| 13. | 5465-01-190-3-03-Sholapur-Gadag guage conversion project-Investments. | 2800.00 | 500.00 |
| 14. | 5465-01-190-3-04-211-K-RIDE - RoB/RuB project Investment fund. | 3000.00 | 2149.00 |
| 15a) | 5465-01-190-3-05-211 New Cost Sharing project-Investments. | 27250.00 | 25652.00 |
| 15b) | 5465-01-190-3-05-133 Special Development Plan. | 4000.00 | 10000.00 |
| 15c) | 5465-01-190-3-05-422 - Special Component Plan. | 2500.00 | 2000.00 |
| 15d) | 5465-01-190-3-05-423 - Tribal Sub Plan. | 1250.00 | 1000.00 |
| 16. | 5465-01-190-3-07-211 Computer Rail Service for Bangalore. | 100.00 | 500.00 |
| 17. | 5465-01-190-3-08-Cost Sharing Ramanagaram-Mysore Railway Doubling-Other expenditure. | 2500.00 | 2500.00 |
| 19 | 5465-01-1-190-3-09-Land for railway cargo complex at Hubli. | 1.00 | 1.00 |
| 19a) | 5465-01-190-3-10-133-Cost sharing-Bidar-Gulbarga New Railway line - SDP. | 4250.00 | 3909.56 |
| 19b) | 5465-01-190-3-10-422-Special Component Plan. | 500.00 | 300.00 |
| 19c) | 5465-01-190-3-10-423-Tribal Sub Plan. | 250.00 | 150.00 |
| 20. | 5465-01-190-1-11-Hubli Ankola Railway project. | 1.00 | 1.00 |
| 21. | 5465-01-190-1-01-211-iDeCK-Investments. | 200.00 | 200.00 |
| 22. | 5465-01-190-1-15-Karnataka Infrastructure Project Development Fund Capital Expenses. | 1000.00 | 1000.00 |
| 23. | 3451-00-090-1-06-059-Infrastructure Preliminary Studies Other Expenditure. | 797.00 | 300.00 |
| 24. | 3451-00-090-1-06-125-Infrastructure Preliminary Studies - Modernisation. | 100.00 | 100.00 |
| | **Grand Total** | **68930.00** | **73033.56** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಿವಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿಆರ್.ನಂ. 946

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಅವಿಭಕ್ತ ಕುಟುಂಬಗಳಿಗೆ ಒಂದಕ್ಕಿಂತ ಹೆಚ್ಚು ಪಡಿತರ ಚೀಟಿ ನೀಡುವ ಬಗ್ಗೆ ಸರ್ಕಾರದ ನೀತಿ ರಚನೆ-ಬಗ್ಗೆ.

**ಪ್ರಸ್ತಾವನೆ:**

ಒಂದು ಅವಿಭಕ್ತ ಅಥವಾ ಒಟ್ಟು ಕುಟುಂಬದ ಸದಸ್ಯರುಗಳಿಗೆ ಪಡಿತರ ಚೀಟಿ ನೀಡುವಲ್ಲಿ ಪರಿಪಾಲಿಸಬಹುದಾದ ಕ್ರಮದ ಬಗ್ಗೆ ಸರ್ಕಾರದ ಒಂದು ನೀತಿಯನ್ನು ರಚಿಸುವುದು ಅಗತ್ಯವಾಗಿರುತ್ತದೆ. ಪ್ರಸ್ತುತ ರಾಜ್ಯದ ತಾಲ್ಲೂಕುಗಳಲ್ಲಿ ಮತ್ತು ಜಿಲ್ಲೆಗಳಲ್ಲಿ ವಿವಿಧ ರೀತಿಯ ನೀತಿಯನ್ನು ಪಾಲಿಸಲಾಗುತ್ತಿದೆ. ಒಂದು ಅವಿಭಕ್ತ/ಒಟ್ಟು ಕುಟುಂಬದಲ್ಲಿ ಎಷ್ಟೇ ಸದಸ್ಯರು ಇರಲಿ, ಅವರಿಗೆಲ್ಲಾ ಸೇರಿ ಆಹಾರಧಾನ್ಯದ ಗರಿಷ್ಠ ಮಿತಿಯನ್ನು 23 ಕೆ.ಜಿ.ಗೆ ಸೀಮಿತಗೊಳಿಸಿ, ಪ್ರತಿ ಸದಸ್ಯರಿಗೆ 4 ಕೆ.ಜಿ.ಯಂತೆ ಕೆಲವು ತಾಲ್ಲೂಕುಗಳಲ್ಲಿ ಒಂದು ಪಡಿತರ ಚೀಟಿಯನ್ನು ನೀಡಲಾಗಿರುತ್ತದೆ. ಇನ್ನೂ ಕೆಲವು ತಾಲ್ಲೂಕುಗಳಲ್ಲಿ, ಒಟ್ಟು ಕುಟುಂಬದ ಮುಖ್ಯಸ್ಥನ ಹೆಸರಿಗೆ ಒಂದು ಪಡಿತರ ಚೀಟಿಯನ್ನು ನೀಡಿದ್ದರೆ, ವಿವಾಹಿತ ಗಂಡು ಮಕ್ಕಳ ಹೆಸರಿನಲ್ಲಿ ಪ್ರತ್ಯೇಕ ಪಡಿತರ ಚೀಟಿಯನ್ನು ನೀಡಲಾಗಿರುತ್ತದೆ. ಒಂದು ದೊಡ್ಡ ಅವಿಭಕ್ತ/ಒಟ್ಟು ಕುಟುಂಬಕ್ಕೆ ಒಂದೇ ಪಡಿತರ ಚೀಟಿ ನೀಡಿರುವಲ್ಲಿ ಅಸಮಾಧಾನ ಇದ್ದರೆ, 10-20 ಎಕರೆ ನೀರಾವರಿ ಭೂಮಿ ಇರುವಂತಹ ಒಟ್ಟು ಕುಟುಂಬದ ಮುಖ್ಯಸ್ಥನ ಹೆಸರಿಗೆ ಎ.ಪಿ.ಎಲ್. ಕಾರ್ಡು ನೀಡಿ, ವಿವಾಹಿತ ಮಕ್ಕಳ ಹೆಸರಿಗೆ ಬಿಪಿಎಲ್ ಕಾರ್ಡ್‌ಗಳನ್ನು ನೀಡಿರುವಂತಹ ಪ್ರಕರಣಗಳಲ್ಲಿ, ಪಡಿತರ ವ್ಯವಸ್ಥೆಯ ದುರುಪಯೋಗವಾಗುತ್ತಿದೆ. ಆದುದರಿಂದ ರಾಜ್ಯದ ಎಲ್ಲಾ ಜಿಲ್ಲೆಯಲ್ಲಿ ಮತ್ತು ತಾಲ್ಲೂಕುಗಳಲ್ಲಿ ಒಂದೇ ಕ್ರಮವನ್ನು ಪಾಲಿಸಲು ಸಾಧ್ಯವಾಗುವಂತೆ ಒಂದು ನೀತಿಯನ್ನು ರಚಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಒಂದು ದೊಡ್ಡ ಅವಿಭಕ್ತ/ಒಟ್ಟು ಕುಟುಂಬವನ್ನು ಪಡಿತರ ವ್ಯವಸ್ಥೆಗಾಗಿ ಒಂದು ಚಿಕ್ಕ ಸಂಸಾರಕ್ಕಾಗಿ ಸಮಾನವಾಗಿ ಪರಿಗಣಿಸುವುದು ಸಮಂಜಸವಾಗಲಾರದು. ಸಮಾಜದ ಎಲ್ಲಾ ಸದಸ್ಯರಿಗೂ ಸಾಕಷ್ಟು ಆಹಾರಧಾನ್ಯವನ್ನು ರಿಯಾಯಿತಿ ಬೆಲೆಯಲ್ಲಿ ತಲುಪಿಸಬೇಕು ಎನ್ನುವ ಸರ್ಕಾರದ ಮೂಲ ಉದ್ದೇಶ, ಈ ರೀತಿ ಮಾಡಿದಲ್ಲಿ ಸಫಲವಾಗಲಾರದು. ಆದರೆ, ಒಂದು ಶ್ರೀಮಂತ ಒಟ್ಟು ಕುಟುಂಬ ಹೊಂದಿರಬಹುದಾದ ಹತ್ತಾರು ಎಕರೆ ಜಮೀನು ಅಥವಾ ದೊಡ್ಡ ವ್ಯಾಪಾರ-ವಹಿವಾಟನ್ನು ಅವಿಭಕ್ತ ಕುಟುಂಬದ ಮುಖ್ಯಸ್ಥರೊಬ್ಬರ ಹೆಸರಿಗೆ ಮಾತ್ರ ತೋರಿಸಿ, ಆತನಿಗೆ ಎ.ಪಿ.ಎಲ್. ಪಡಿತರ ಚೀಟಿ ನೀಡಿ, ವಿವಾಹಿತ ಗಂಡು ಮಕ್ಕಳನ್ನು ಆಸ್ತಿ ರಹಿತರೆಂದು ಪರಿಗಣಿಸಿ ಬಿಪಿಎಲ್ ಪಡಿತರ ಚೀಟಿಗಳನ್ನು ನೀಡುವುದು ಸಹ ಸಮಂಜಸವಾಗಲಾರದು.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 260 ಡಿಆರ್‌ಎ 2010, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2011**

ಈ ಮೇಲೆ ಹೇಳಿದ ವಾಸ್ತವಾಂಶಗಳನ್ನು ಗಮನದಲ್ಲಿಟ್ಟುಕೊಂಡು, ಒಟ್ಟು ಅಥವಾ ಅವಿಭಕ್ತ ಕುಟುಂಬಕ್ಕೆ ಪಡಿತರ ಚೀಟಿ ನೀಡುವಲ್ಲಿ ಅನುಸರಿಸಬೇಕಾದ ನೀತಿಯನ್ನು ಈ ಕೆಳಗೆ ನೀಡಲಾಗಿದೆ :

ಅ) ಒಂದು ಕುಟುಂಬದಲ್ಲಿ, ಒಂದಕ್ಕಿಂತ ಹೆಚ್ಚು ತಲೆಮಾರಿನ ಸದಸ್ಯರಿದ್ದು ಅಥವಾ ಒಂದೆ ತಲೆಮಾರಿನ ಸಹೋದರರಿದ್ದು, ಒಂದು ಅವಿಭಾಜ್ಯ ಪಿತ್ರಾರ್ಜಿತ ಆಸ್ತಿ ಅಥವಾ ವ್ಯಾಪಾರ-ವಹಿವಾಟು ಅವರ ಆದಾಯ ಮೂಲ ಆಗಿದ್ದಲ್ಲಿ ಅಥವಾ ಅದರಲ್ಲಿ ಹಕ್ಕಿದ್ದಲ್ಲಿ, ಅಂತಹ ಕುಟುಂಬದ ಸದಸ್ಯರು ಒಂದು ಮನೆಯಲ್ಲಿ ವಾಸವಾಗಿರಲಿ, ಅಥವಾ ಪ್ರತ್ಯೇಕವಾಗಿ ವಾಸವಾಗಿರಲಿ, ಪಡಿತರ ವ್ಯವಸ್ಥೆಯ ಮಟ್ಟಿಗೆ ಅಂತಹ ಕುಟುಂಬವನ್ನು ಒಂದು ಅವಿಭಕ್ತ ಅಥವಾ ಒಟ್ಟು ಕುಟುಂಬ ಎಂದು ಪರಿಗಣಿಸಲಾಗುವುದು.

ಆ) ಒಂದು ಅವಿಭಕ್ತ/ಒಟ್ಟು ಕುಟುಂಬವು ಬಡತನ ರೇಖೆಗಿಂತ ಮೇಲಿದ್ದಾರೋ ಅಥವಾ ಕೆಳಗಿದ್ದಾರೋ ಎಂದು ನಿರ್ಧರಿಸಲು ಸಾಧ್ಯವಾಗುವಂತೆ ಅಂತಹ ಕುಟುಂಬದ ಎಲ್ಲಾ ಸದಸ್ಯರ ಆದಾಯವನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.

ಇ) ಒಂದು ಅವಿಭಕ್ತ/ಒಟ್ಟು ಕುಟುಂಬದ ಆದಾಯ ಮೂಲವಾದ ಕೃಷಿ ಭೂಮಿ ಅಥವಾ ವ್ಯಾಪಾರ-ವಹಿವಾಟು ಅವಿಭಕ್ತ ಕುಟುಂಬದ ಯಜಮಾನ ಅಥವಾ 'ಕರ್ತ'ನ ಹೆಸರಿನಲ್ಲಿ ಇದ್ದರೂ, ಅದರಲ್ಲಿ ಎಲ್ಲಾ ಗಂಡು ಮಕ್ಕಳಿಗೂ ಸಮಪಾಲು ಇರುವುದರಿಂದ, ಅದರಿಂದ ಬರುವ ಆದಾಯವನ್ನು ಒಟ್ಟು ಕುಟುಂಬದ ಎಲ್ಲಾ ಸದಸ್ಯರ ಆದಾಯವೆಂದು ಪರಿಗಣಿಸತಕ್ಕದ್ದು.

ಈ) ಅವಿಭಕ್ತ ಕುಟುಂಬದ ಆದಾಯ ಮೂಲವು ಒಂದಾಗಿದ್ದರೂ, ಒಂದು ಅವಿಭಕ್ತ ಕುಟುಂಬದ ವಿವಾಹಿತ ಗಂಡು ಮಕ್ಕಳು ಬಯಸಿದಲ್ಲಿ, ಪ್ರತ್ಯೇಕ ಪಡಿತರ ಚೀಟಿಗಳನ್ನು ನೀಡಬಹುದು. ಆದರೆ, ಕಂಪ್ಯೂಟರ್ 'ಡಾಟಾ ಬೇಸ್' ನಲ್ಲಿ ಅವಿಭಕ್ತ ಕುಟುಂಬದ ಎಲ್ಲಾ ಸದಸ್ಯರ ಮಾಹಿತಿಯನ್ನು ಒಂದೆ ಕಡೆ ಇಡತಕ್ಕದ್ದು, ವಿಭಕ್ತ/ಒಟ್ಟು ಕುಟುಂಬಕ್ಕೆ ಸೇರಿದ ಆಸ್ತಿ ಅಥವಾ ವ್ಯವಹಾರ ಯಾವ ಸದಸ್ಯನ ಹೆಸರಿನಲ್ಲಿ ಇದೆಯೊ, ಆತನ ಹೆಸರಿಗೆ ನೀಡುವ ಪಡಿತರ ಚೀಟಿಯಲ್ಲಿ, ಪ್ರಾಮುಖ್ಯವಾಗಿ "ಮುಖ್ಯ ಕುಟುಂಬ" - "ಉಪ-ಕುಟುಂಬಗಳಿಗೆ ಪ್ರತ್ಯೇಕ ಕಾರ್ಡು ನೀಡಲಾಗಿದೆ" ಎಂದು ನಮೂದಿಸತಕ್ಕದ್ದು. ಉಪ ಕುಟುಂಬಗಳಿಗೆ ನೀಡುವ ಕಾರ್ಡುಗಳ ಮೇಲೆ "ಉಪ ಕುಟುಂಬ" - "ಮುಖ್ಯ ಕುಟುಂಬಕ್ಕೆ ಪ್ರತ್ಯೇಕ ಕಾರ್ಡು ನೀಡಲಾಗಿದೆ" ಎಂದು ಮುದ್ರಿಸತಕ್ಕದ್ದು. ಮುಖ್ಯ ಕುಟುಂಬ ಮತ್ತು ಉಪ ಕುಟುಂಬಗಳಿಗೆ ನೀಡುವ ಕಾರ್ಡುಗಳ ಸಂಖ್ಯೆ ಒಂದೇ ಆಗಿರತಕ್ಕದ್ದು. ಆದರೆ, ಮುಖ್ಯ ಕುಟುಂಬದ ಕಾರ್ಡ್‌ನ ಸಂಖ್ಯೆ ಮುಂದೆ MF ಎಂದೂ, 1ನೇ ಉಪ ಕುಟುಂಬದ ಕಾರ್ಡ್‌ನ ಸಂಖ್ಯೆ ಮುಂದೆ SF1 ಎಂದೂ, ಎರಡನೇ ಉಪ ಕುಟುಂಬದ ಕಾರ್ಡ್‌ನ ಸಂಖ್ಯೆ ಮುಂದೆ SF2 ಎಂದೂ, ಮೂರನೆ ಉಪ ಕುಟುಂಬದ ಕಾರ್ಡ್‌ನ ಸಂಖ್ಯೆ ಮುಂದೆ SF3ಎಂದೂ, ಇತ್ಯಾದಿಯಾಗಿ ನಮೂದಿಸತಕ್ಕದ್ದು.

ಉ) ಒಂದು ಅವಿಭಕ್ತ ಕುಟುಂಬವು ಬಡತನ ರೇಖೆಗಿಂತ ಕೆಳಗೆ ಇದೆಯೆಂದು ಪರಿಗಣಿಸಲ್ಪಟ್ಟಲ್ಲಿ ಮತ್ತು ಒಂದು ಪಡಿತರ ಚೀಟಿಯನ್ನು ಬಯಸಿದಲ್ಲಿ, ಅಂತಹ ಅವಿಭಕ್ತ ಕುಟುಂಬದ ಯಜಮಾನ, ಆತನ ಹೆಂಡತಿ ಹಾಗೂ ಅವರ ಅವಿವಾಹಿತ ಮಕ್ಕಳನ್ನು ಒಂದು ಚಿಕ್ಕ ಕುಟುಂಬಕ್ಕೆ ಸಮಾನಾಂತರವೆಂದು ಪರಿಗಣಿಸಿ ಪಡಿತರ ಲೆಕ್ಕ ಹಾಕತಕ್ಕದ್ದು. ಪ್ರತಿ ವಿವಾಹಿತ ಮಗನ ಕುಟುಂಬವನ್ನು ಒಂದು ಚಿಕ್ಕ ಕುಟುಂಬವೆಂದು ಪರಿಗಣಿಸಿ ಪಡಿತರ ಲೆಕ್ಕ ಹಾಕತಕ್ಕದ್ದು. ಅಂತಹ ಒಂದು ಅವಿಭಕ್ತ ಕುಟುಂಬದಲ್ಲಿ ಇಬ್ಬರು ವಿವಾಹಿತ ಗಂಡು ಮಕ್ಕಳು ಇದ್ದರೆ ಎರಡು ಚಿಕ್ಕ ಕುಟುಂಬಗಳಿಗೆ ನೀಡುವ ಆಹಾರಧಾನ್ಯ ಇತ್ಯಾಧಿಗಳನ್ನೂ : ಮೂರು ವಿವಾಹಿತ ಮಕ್ಕಳು ಇದ್ದರೆ, ಮೂರು ಚಿಕ್ಕ ಕುಟುಂಬಗಳಿಗೆ ನೀಡುವ ಆಹಾರಧಾನ್ಯ ಇತ್ಯಾದಿಗಳ ಪಡಿತರ ನೀಡತಕ್ಕದ್ದು.

ಊ) ಒಂದು ಅವಿಭಕ್ತ ಕುಟುಂಬ ಬಡತನ ರೇಖೆಗಿಂತ ಕೆಳಗೆ ಇದೆಯೆಂದು ಪರಿಗಣಿಸಲ್ಪಟ್ಟಲ್ಲಿ ಮತ್ತು "ಮುಖ್ಯ ಕುಟುಂಬ" ಮತ್ತು "ಉಪ ಕುಟುಂಬ" ಗಳಿಗೆ ಪ್ರತ್ಯೇಕ ಕಾರ್ಡುಗಳನ್ನು ನೀಡಲ್ಪಟ್ಟಲ್ಲಿ, ಮುಖ್ಯ ಕುಟುಂಬ ಮತ್ತು ಉಪ ಕುಟುಂಬಗಳನ್ನು ಪ್ರತ್ಯೇಕ ಚಿಕ್ಕ ಕುಟುಂಬಗಳು ಎಂದು ಪರಿಗಣಿಸಿ, ಪಡಿತರ ಲೆಕ್ಕ ಹಾಕತಕ್ಕದ್ದು ಮತ್ತು ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಸೋಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

ಪಿಆರ್.ನಂ. 947

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ರಾಜ್ಯ ವಕೀಲರ ಸಂಘಗಳಿಗೆ ಇ-ಗ್ರಂಥಾಲಯವನ್ನು ಸ್ಥಾಪಿಸಲು ಹಣ ಬಿಡುಗಡೆ ಮಾಡುವ ಬಗ್ಗೆ:-

**ಓದಲಾಗಿದೆ :**
1. 2010-11ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯ ಮಂತ್ರಿಗಳು ರೂ. 1.00 ಕೋಟಿಗಳನ್ನು ರಾಜ್ಯ ನ್ಯಾಯಾಲಯಗಳಲ್ಲಿ ಡಿಜಿಟಲ್ ಲೈಬ್ರರಿಗಳ ಸೌಲಭ್ಯಗಳನ್ನು ಒದಗಿಸುವುದಾಗಿ ಘೋಷಿಸಿರುತ್ತಾರೆ.
2. ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 69 ವೆಚ್ಚ-10/2011, ದಿನಾಂಕ 15-02-2011
3. ಸರ್ಕಾರದ ಆದೇಶ ಸಂಖ್ಯೆ: ಲಾ 96 ಎಲ್‌ಸಿಎಲ್ 2010, ದಿನಾಂಕ 21-02-2011
4. ದಿನಾಂಕ 05-03-2011ರಂದು ಮುಖ್ಯ ಕಾರ್ಯದರ್ಶಿ, ಸಿಆಸುಇ (ಇ-ಆಡಳಿತ) ಇವರ ಅಧ್ಯಕ್ಷತೆಯಲ್ಲಿ ನಡೆದ ವಾರ್ಷಿಕ ಕ್ರಿಯಾ ಯೋಜನೆಗಳ ಅನುಮೋದನೆ ಸಮಿತಿ ಸಭೆಯ ನಡವಳಿಗಳು.
5. ಸರ್ಕಾರದ ಅದೇಶ ಸಂಖ್ಯೆ: ಲಾ 96 ಎಲ್‌ಸಿಎಲ್ 2010, ದಿನಾಂಕ 15-03-2011
6. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 142 ವೆಚ್ಚ 10/2011 ದಿ: 25-03-2011

**ಪ್ರಸ್ತಾವನೆ :**

2010-11ನೇ ಸಾಲಿನಲ್ಲಿ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ರೂ. 1.00 ಕೋಟಿಗಳನ್ನು ರಾಜ್ಯದ ನ್ಯಾಯಾಲಯಗಳಲ್ಲಿ ಡಿಜಿಟಲ್ ಲೈಬ್ರರಿ ಸೌಲಭ್ಯಗಳಿಗೆ ಒದಗಿಸುವುದಾಗಿ ಘೋಷಿಸಿರುತ್ತಾರೆ. ಯೋಜನಾ ಕಾರ್ಯಕ್ರಮಗಳ ಅಡಿ ಒದಗಿಸಿರುವ ಹಣವನ್ನು ಯೋಜನೇತರ ಲೆಕ್ಕ ಶೀರ್ಷಿಕೆಗೆ ಮರುಹೊಂದಾಣಿಕೆ ಮಾಡಲು ಅವಕಾಶವಿರುವುದಿಲ್ಲ. ಆದ್ದರಿಂದ ಲೆಕ್ಕ ಶೀರ್ಷಿಕೆ 2014-0-800-01-05-101ರ ಅಡಿಯಲ್ಲಿ ಒದಗಿಸಿರುವ ರೂ. 100-00 ಲಕ್ಷಗಳನ್ನು ಕೋರ್ಟ್‌ಗಳಲ್ಲಿ ಡಿಜಿಟಲ್ ಲೈಬ್ರರಿಯನ್ನು ಸ್ಥಾಪಿಸಲು ಯೋಜನಾ ಇಲಾಖೆಯು ಸಹಮತಿಸಿರುತ್ತದೆ.

ನ್ಯಾಯಾಲಯಗಳಿಗೆ ಡಿಜಿಟಲ್ ಲೈಬ್ರರಿಗಳನ್ನು ಒದಗಿಸಲು ಲೆಕ್ಕ ಶೀರ್ಷಿಕೆ 2014-00-800-1-05ರ object head 059 ಇತರೆ-ಖರ್ಚು ರಡಿ ಒದಗಿಸಲಾಗಿದ್ದ ಅನುದಾನವನ್ನು object head 101 ಸಹಾಯಾನುದಾನ ರಡಿಗೆ ಮರುಹಂಚಿಕೆ ಮಾಡಿ ತಿದ್ದುಪಡಿ ಆದೇಶವನ್ನು ಖಜಾನೆ ನಿರ್ದೇಶನಾಲಯಕ್ಕೆ ಕಳುಹಿಸಲಾಗಿದೆ. ಆದ್ದರಿಂದ ವಕೀಲರ ಸಂಘಗಳಿಗೆ ಇ-ಗ್ರಂಥಾಲಯವನ್ನು ಸ್ಥಾಪಿಸಲು ಏಕವಾರಿಯ ಅನುದಾನವಾಗಿ ರೂ. 100.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2014-00-800-1-05-101 ರಿಂದ ಬಿಡುಗಡೆ ಮಾಡಲು ಸಹಮತಿಸಿರುವುದಾಗಿ ಮೇಲೆ ಓದಲಾದ ದಿನಾಂಕ 15-02-2011ರ ಪತ್ರದಲ್ಲಿ ಆರ್ಥಿಕ ಇಲಾಖೆಯು ತಿಳಿಸಿರುತ್ತದೆ.

ಅದರಂತೆ ಉಲ್ಲೇಖಿತ (3)ರ ಸರ್ಕಾರದ ಆದೇಶ ಸಂಖ್ಯೆ: ಲಾ 96 ಎಲ್‌ಸಿಎಲ್ 2010 ದಿನಾಂಕ 21-02-2011ರಲ್ಲಿ ವಕೀಲರ ಸಂಘಗಳಿಗೆ ಇ-ಗ್ರಂಥಾಲಯವನ್ನು ಸ್ಥಾಪಿಸಲು ಏಕಬಾರಿಯ ಅನುದಾನವಾಗಿ ರೂ. 100-00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು. ನಂತರ ಉಲ್ಲೇಖಿತ (4)ರ ಸಮಿತಿ ಸಭೆಯ ತೀರ್ಮಾನದಂತೆ ರೂ. ಒಂದು ಕೋಟಿ ಅನುದಾನವನ್ನು ಎಲ್ಲಾ ವಕೀಲರ ಸಂಘಗಳಿಗೆ ತಲಾ ರೂ. 45,000 ಗಳಂತೆ ಹಂಚಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಮೂಲಕ ಬಿಡುಗಡೆ ಮಾಡಲು ಉಲ್ಲೇಖಿತ (5)ರ ಲಾ 96 ಎಲ್‌ಸಿಎಲ್ 2010, ದಿನಾಂಕ 15-03-2011ರ ಆದೇಶದಲ್ಲಿ ರಿಜಿಸ್ಟ್ರಾರ್ ಜನರಲ್ ರವರಿಗೆ ಅಧಿಕಾರ ನೀಡಲಾಗಿತ್ತು. ಪ್ರಸ್ತುತ ಆರ್ಥಿಕ ಇಲಾಖೆ ಉಲ್ಲೇಖಿತ (6)ರ ಟಿಪ್ಪಣಿ ಸಂಖ್ಯೆ: ಆಇ 142 ವೆಚ್ಚ-10/2011, ದಿನಾಂಕ 25-03-2011ರಲ್ಲಿ ಲೆಕ್ಕ ಶೀರ್ಷಿಕೆ 2014-00-800-1-05-101ರಲ್ಲಿ ನೀಡಿರುವ ಹಣವನ್ನು ಜಿಲ್ಲಾಧಿಕಾರಿಗಳಿಗೆ ನೀಡಿ ಅದನ್ನು ಆಯಾ ಜಿಲ್ಲೆಯ ವಕೀಲರ ಸಂಘಗಳಿಗೆ ಇ-ಲೈಬ್ರರಿ ಸ್ಥಾಪಿಸುವ ಸಲುವಾಗಿ ಹಂಚಲು ಆ ಬಗ್ಗೆ ಪ್ರತ್ಯೇಕ ಲೆಕ್ಕ ನಿರ್ವಹಿಸುವಂತೆ ತಿಳಿಸಿ ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಿ ಸಹಮತಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 96 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ : 26-3-2011**

ಪ್ರಸ್ತಾವನೆಯನ್ವಯ ಕೂಲಂಕಷವಾಗಿ ಪರಿಶೀಲಿಸಿ ಉಲ್ಲೇಖಿತ (5)ರ ಅಧಿಕಾರ ಪ್ರತ್ಯಾಯೋಜಿತ ಆದೇಶವನ್ನು ರದ್ದುಗೊಳಿಸಿ ಪ್ರತಿ ವಕೀಲರ ಸಂಘಗಳಿಗೆ ತಲಾ ಒಂದು ಕಂಪ್ಯೂಟರ್, ಯುಪಿಎಸ್ ಮತ್ತು ಪ್ರಿಂಟರ್ ಖರೀದಿಸಲು ತಗಲುವ ವೆಚ್ಚವಾಗಿ ರೂ. 45,000 ಗಳಂತೆ ವಿತರಿಸಲು ಉಲ್ಲೇಖತ (3)ರ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದಲ್ಲಿ ಈ ಆದೇಶದ ಅನುಬಂಧದಲ್ಲಿರುವಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಒಟ್ಟು ರೂ. 81 ಲಕ್ಷಗಳನ್ನು (ಎಂಬತ್ತ ಒಂದು ಲಕ್ಷ ರೂಪಾಯಿಗಳು ಮಾತ್ರ) ಹಂಚಲಾಗಿದೆ.

ಸಂಬಂಧಪಟ್ಟ ವಕೀಲರ ಸಂಘಗಳು, ಇ-ಆಡಳಿತ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, ವಿಧಾನ ಸೌಧ ರವರು ಪಟ್ಟಿ ಮಾಡಿರುವ ಅಧಿಕೃತ ವ್ಯಾಪಾರಿಗಳಿಂದ ಖರೀದಿಸಿ ಬಳಕೆ ಪ್ರಮಾಣ ಪತ್ರವನ್ನು ಪಡೆದು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಹಾಗೂ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ಸಲ್ಲಿಸತಕ್ಕದ್ದು.

ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಅನುಬಂಧದಲ್ಲಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ 2014-00-800-1-05-101 (ಯೋಜನೆ) ರಡಿಯಲ್ಲಿ ಪಡೆದು ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ನಲ್ಲಿ ಅನುಮತಿ ಪಡೆದು ನೋಂದಾಯಿಸಲ್ಪಟ್ಟಿರುವ ಅಧಿಕೃತ ವಕೀಲರ ಸಂಘಗಳಿಗೆ

ನಿಗದಿಪಡಿಸಿರುವ ಹಣವನ್ನು ಹಂಚಿ ಬಳಿಕೆ ಪ್ರಮಾಣ ಪತ್ರವನ್ನು ಪಡೆದು ಈ ಬಗ್ಗೆ ವಿತರಿಸಿರುವ ಹಣಕ್ಕೆ ಪ್ರತ್ಯೇಕ ಲೆಕ್ಕವಿಟ್ಟು ಸರ್ಕಾರಕ್ಕೆ ವರದಿ ಮಾಡುವಂತೆ ತಿಳಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ಇ-ಆಡಳಿತ ವಾರ್ಷಿಕ ಕ್ರಿಯಾ ಯೋಜನೆಗಳ ಅನುಮೋದನೆಗಾಗಿ ದಿನಾಂಕ 5-3-2011 ರಂದು ನಡೆದ ಸಮಿತಿ ಸಭೆಯ ನಿರ್ಣಯಗಳನ್ವಯ ಹಾಗೂ ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 142 ವೆಚ್ಚ-10/2011 ದಿನಾಂಕ 25-03-2011ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಆರ್.ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಅನುಬಂಧ

ಸರ್ಕಾರದ ಆದೇಶ ಸಂಖ್ಯೆ: ಲಾ 96 ಎಲ್‌ಸಿಎಲ್ 2010, ದಿನಾಂಕ 26-03-2011

ರಾಜ್ಯದಲ್ಲಿನ ವಿವಿಧ ಮಟ್ಟದ ವಕೀಲರ ಸಂಘಗಳಿಗೆ 2010-11ನೇ ಸಾಲಿನಲ್ಲಿ ಇ-ಗ್ರಂಥಾಲಯಕ್ಕಾಗಿ ಬಿಡುಗಡೆ ಮಾಡಬೇಕಾದ ಅನುದಾನದ ವಿವರಗಳು.

| ಕ್ರಮ ಸಂಖ್ಯೆ | ಜಿಲ್ಲೆ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆಗೊಳಿಸಬೇಕಾದ ಮೊತ್ತ |
|---|---|---|---|---|
| | | ಜಿಲ್ಲಾ ಮಟ್ಟದ ವಿಭಾಗ ವಕೀಲರ ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | 2 | 3 | 4 | 5 |
| 1 | ಬೆಂಗಳೂರು ನಗರ ವಕೀಲರ ಸಂಘ | 1 | 1(ಆನೇಕಲ್) | 90.000-00 |
| 2 | ಬೆಂಗಳೂರು (ಗ್ರಾಮಾಂತರ) | - | 4 | 1,80,000-00 |
| 3 | ರಾಮನಗರ ಜಿಲ್ಲೆ | 1 | 3 | 1,80,000-00 |
| 4 | ಕೋಲಾರ | 1 | 6 | 3,15,000-00 |
| 5 | ಚಿಕ್ಕಬಳ್ಳಾಪುರ | 1 | 4 | 2,25,000-00 |
| 6 | ತುಮಕೂರು | 1 | 9 | 4,50,000-00 |
| 7 | ಮೈಸೂರು | 1(ವಿ.ಮ) | 6 | 3,15,000-00 |
| 8 | ಚಾಮರಾಜನಗರ | 1 | 3 | 1,80,000-00 |
| 9 | ಮಂಡ್ಯ | 1 | 6 | 3,15,000-00 |
| 10 | ಹಾಸನ | 1 | 7 | 3,60,000-00 |
| 11 | ಶಿವಮೊಗ್ಗ | 1 | 6 | 3,15,000-00 |
| 12 | ಚಿಕ್ಕಮಗಳೂರು | 1 | 6 | 3,15,000-00 |
| 13 | ಚಿತ್ರದುರ್ಗ | 1 | 5 | 2,70,000-00 |
| 14 | ದಾವಣಗೆರೆ | 1 | 5 | 2,70,000-00 |
| 15 | ಬಳ್ಳಾರಿ | 1 | 6 | 3,15,000-00 |
| 16 | ಬೆಳಗಾಂ | 1(ವಿ.ಮ) | 11 | 5,40,000-00 |
| 17 | ಬಿಜಾಪುರ | 1 | 4 | 2,25,000-00 |
| 18 | ಬಾಗಲಕೋಟೆ | 1 | 6 | 3,15,000-00 |
| 19 | ಧಾರವಾಡ | 1 | 3 | 1,80,000-00 |
| 20 | ಹಾವೇರಿ | 1 | 6 | 3,15,000-00 |
| 21 | ಗದಗ್ | 1 | 4 | 2,25,000-00 |
| 22 | ಉತ್ತರ ಕನ್ನಡ | 1 | 11 | 5,40,000-00 |
| 23 | ಬೀದರ್ | 1 | 4 | 2,25,000-00 |
| 24 | ಗುಲ್ಬರ್ಗ | 1(ವಿ.ಮ) | 7 | 3,60,000-00 |
| 25 | ರಾಯಚೂರು | 1 | 4 | 2,25,000-00 |
| 26 | ಕೊಪ್ಪಳ | 1 | 3 | 1,80,000-00 |
| 27 | ದಕ್ಷಿಣ ಕನ್ನಡ | 1 | 5 | 2,70,000-00 |
| 28 | ಉಡುಪಿ | 1 | 2 | 1,35,000-00 |
| 29 | ಕೊಡಗು | 1 | 2 | 1,35,000-00 |
| 30 | ಯಾದಗಿರಿ | 1 | 2 | 1,35,000-00 |
| | ಒಟ್ಟು | 29 | 151 | 81,00,000-00 |

**ಶಕುಂತಲ ಹೆಚ್. ಆರ್.**
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಆಡಳಿತ-2)

ಪಿ.ಆರ್. 948

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ದ್ಯಾಮಣ್ಣ ನಿಂಗಪ್ಪ, ಬಡಿಗೇರ, ರೇಷ್ಮೆ ಪ್ರವರ್ತಕರು (ನಿವೃತ್ತ) ಇವರು ಕಾಣೆಯಾಗಿದ್ದು, ಇವರ ಪತ್ನಿ ಶ್ರೀಮತಿ ರತ್ನವ್ವ ದ್ಯಾಮಣ್ಣ ಬಡಿಗೇರ ಇವರಿಗೆ ಕುಟುಂಬ ವೇತನ ಸೌಲಭ್ಯವನ್ನು ಮಂಜೂರು ಮಾಡುವ ಬಗ್ಗೆ.–

**ಓದಲಾಗಿದೆ :**
1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ 1(5)ಕುಂ.ಪಿಂಚಣಿ/71/2009–10, ದಿನಾಂಕ 14–10–2010 ಹಾಗೂ 14–3–2011.
2. ಅಧಿಕೃತ ಜ್ಞಾಪನ ಸಂಖ್ಯೆ: ಆಇ(ವಿಶೇಷ) 11 ಕುವಿವೇ 87, ದಿನಾಂಕ 21–3–1988,
3. ಶ್ರೀ ರತ್ನವ್ವ ಕೋಂ. ದ್ಯಾಮಣ್ಣ ಬಡಿಗೇರ ಇವರ ದಿನಾಂಕ 12–2–2011ರ ಪತ್ರ.

**ಪ್ರಸ್ತಾವನೆ :**

ಶ್ರೀ ದ್ಯಾಮಣ್ಣ ನಿಂಗಪ್ಪ ಬಡಿಗೇರ, ರೇಷ್ಮೆ ಪ್ರವರ್ತಕರು (ನಿವೃತ್ತ) ಇವರು ದಿನಾಂಕ 30–11–2004 ರಂದು ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಿರುತ್ತಾರೆ. ಇವರು ದಿನಾಂಕ 15–2–2008 ರಿಂದ ಕಾಣೆಯಾಗಿರುತ್ತಾರೆ. ಈ ಸಂಬಂಧ ನಿವೃತ್ತ ನೌಕರರ ಪತ್ನಿಯಾದ ಶ್ರೀಮತಿ ರತ್ನವ್ವ ದ್ಯಾಮಣ್ಣ ಬಡಿಗೇರ ಇವರು ಹಾವೇರಿ ಪೋಲೀಸ್ ಠಾಣೆಯಲ್ಲಿ ದೂರು ನೀಡುತ್ತಾರೆ. ಸದರಿಯವರನ್ನು ಪತ್ತೆ ಮಾಡಲು ಸಾಕಷ್ಟು ಪ್ರಯತ್ನ ಮಾಡಿದರೂ ಪತ್ತೆಯಾಗುವ ಲಕ್ಷಣಗಳು ಕಂಡುಬರುತ್ತಿಲ್ಲವೆಂದು ಪ್ರಕರಣವನ್ನು ಸಧ್ಯಕ್ಕೆ ಸ್ಥಗಿತಗೊಳಿಸಿ ಡಾರ್ನಮೆಂಟ್ ಫೈಲ್‌ನಲ್ಲಿಟ್ಟು ಮಂಜೂರಾತಿ ನೀಡಿರುವ ನಾಪತ್ತೆ ದೃಢೀಕರಣ ಪತ್ರದೊಂದಿಗೆ ಕಾಣೆಯಾದ ನಿವೃತ್ತ ನೌಕರರ ಪತ್ನಿ ಮನವಿ ಸಲ್ಲಿಸಿ, ಕುಟುಂಬ ಪಿಂಚಣಿಯನ್ನು ಮಂಜೂರು ಮಾಡುವಂತೆ ಕೋರಿರುವುದರಿಂದ ಕಾಣೆಯಾದ ನೌಕರರ ಪತ್ನಿಗೆ ಕುಟುಂಬ ಪಿಂಚಣಿ ಮಂಜೂರು ಮಾಡುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ ಮತ್ತು ಈ ಸಂಬಂಧ ಪತ್ರದೊಂದಿಗೆ ನೌಕರರ ಸೇವಾ ಪುಸ್ತಕ, ಪಿಂಚಣಿ ಪುಸ್ತಕದ ಪ್ರತಿ, ನಷ್ಟಬಂಧಿ ಪ್ರಮಾಣ ಪತ್ರ, ಜೀವಂತ ಸದಸ್ಯರ ಜೀವನ ದೃಢೀಕರಣ, ಪೋಲೀಸ್ ಠಾಣೆ ಪ್ರಥಮ ತನಿಖಾ ವರದಿ ಹಾಗೂ ಇನ್ನಿತರ ದಾಖಲಾತಿಗಳನ್ನು ಕಳುಹಿಸಿ ಅಗತ್ಯ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಅಧಿಕೃತ ಜ್ಞಾಪನದನ್ವಯ ಕಣ್ಮರೆಯಾದ ದಿನಾಂಕದಿಂದ ಒಂದು ವರ್ಷದ ಅವಧಿಯ ಬಳಿಕ ನಿವೃತ್ತ ಸರ್ಕಾರಿ ನೌಕರರ ಪ್ರಕರಣಗಳಲ್ಲಿ ನಾಮನಿರ್ದೇಶನವನ್ನು ಗಮನದಲ್ಲಿಟ್ಟುಕೊಂಡು ಕುಟುಂಬ ವೇತನ ಮತ್ತು ಕಣ್ಮರೆಯಾದ ದಿನಾಂಕದಿಂದ ಬಾಕಿ ಇರುವ ಪಿಂಚಣಿ ಮೊಬಲಗನ್ನು ಮಂಜೂರು ಮಾಡಲು ಅವಕಾಶವಿದ್ದು, ಸರ್ಕಾರವು ಮಂಜೂರಾತಿಗೆ ಸಕ್ರಮ ಪ್ರಾಧಿಕಾರವಾಗಿರುವುದರಿಂದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುವಂತೆ ಕಾಣೆಯಾದ ನಿವೃತ್ತ ನೌಕರರ ಪತ್ನಿಗೆ ಕುಟುಂಬ ವೇತನ ಸೌಲಭ್ಯ ಮಂಜೂರು ಮಾಡುವ ಕುರಿತಂತೆ ಪರಿಶೀಲಿಸಿ, ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದನ್ವಯ ಎಲ್ಲಾ ಕ್ರಮಗಳನ್ನು ಪ್ರಸ್ತುತ ಪ್ರಕರಣದಲ್ಲಿ ಕೈಗೊಳ್ಳಲಾಗಿರುವುದರಿಂದ ನಿಯಮಾನುಸಾರ ನೀಡಬೇಕಾಗಿರುವ ಕುಟುಂಬ ವೇತನ ಹಾಗೂ ಕಣ್ಮರೆಯಾದ ದಿನಾಂಕದಿಂದ ಬಾಕಿ ಇರುವ ಪಿಂಚಣಿ ಮೊಬಲಗನ್ನು ಮಂಜೂರು ಮಾಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 138 ರೇಇವಿ 2010, ಬೆಂಗಳೂರು, ದಿನಾಂಕ : 26–3–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ನೇಮಕಾತಿ ಪ್ರಾಧಿಕಾರವು ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಇ(ವಿಶೇಷ) 11 ಕುವಿವೇ 87, ದಿನಾಂಕ 21–3–1988ರಲ್ಲಿ ವಿಧಿಸಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಲಾಗಿರುವುದನ್ನು ಖಾತ್ರಿಪಡಿಸಿಕೊಂಡ ನಂತರ ಶ್ರೀ ದ್ಯಾಮಣ್ಣ ನಿಂಗಪ್ಪ ಬಡಿಗೇರ, ರೇಷ್ಮೆ ಪ್ರವರ್ತಕರು (ನಿವೃತ್ತ) ಇವರ ಪತ್ನಿಯಾದ ಶ್ರೀ ರತ್ನವ್ವ ಕೋಂ ದ್ಯಾಮಣ್ಣ ಬಡಿಗೇರ ಇವರಿಗೆ ನಿಯಮಗಳನ್ವಯ ನೀಡಬಹುದಾದ ಕುಟುಂಬ ವೇತನ ಹಾಗೂ ನೌಕರರು ಕಣ್ಮರೆಯಾದ ದಿನಾಂಕದಿಂದ ಬಾಕಿ ಇರುವ ಪಿಂಚಣಿ–ಮೊಬಲಗನ್ನು ನೀಡುವುದಕ್ಕೆ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 949

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ಕೆಳದರ್ಜೆಗಿಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್, 548 ಎಸ್.ಎ.ಎಸ್. 08, ದಿನಾಂಕ 31–01–09
2. ಸರ್ಕಾರದ ಆದೇಶ ಸಂಖ್ಯೆ: ಸಿಐ 50 ಎಸ್‌ಜಿಎಫ್ 2009, ದಿನಾಂಕ 18–03–2009
3. ಸರ್ಕಾರದ ಆದೇಶ ಸಂಖ್ಯೆ: ಸಿಐ 130 ಎಸ್‌ಜಿಎಫ್ 2010, ದಿನಾಂಕ 03–09–2010
4. ಸರ್ಕಾರದ ಪತ್ರ ಸಂಖ್ಯೆ: ಡಿಪಿಎಆರ್/365/ಎಸ್‌ಎಎಸ್/2009, ದಿನಾಂಕ 16–03–2011

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿನ ದಿನಾಂಕ 31–01–09ರ ಸಿ.ಆ.ಸು.ಇಲಾಖೆ ಅಧಿಸೂಚನೆಯಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ಕೆಳದರ್ಜೆಗಿಳಿಸಿ ಸದರಿ ಹುದ್ದೆಗೆ ಶ್ರೀ ಎ. ಕೆ. ಮೊನ್ನಪ್ಪ, ಭಾ.ಆ.ಸೇ. ರವರನ್ನು ನೇಮಿಸಲಾಗಿದ್ದು, ಅದರಂತೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ಮೇಲೆ ಓದಲಾದ (2)ರಲ್ಲಿರುವ ದಿನಾಂಕ 18–03–2009ರ ಆದೇಶದಲ್ಲಿ ಐ.ಎ.ಎಸ್. ವೇತನ ಶ್ರೇಣಿ 15600+39100+pay grade 7600ಕ್ಕೆ ಕೆಳದರ್ಜೆಗಿಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ (3)ರಲ್ಲಿರುವ ದಿನಾಂಕ 03–09–2010ರ ಆದೇಶದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ 31–01–11ರವರೆವಿಗೆ ಅಥವಾ ಈ ಹುದ್ದೆಯನ್ನು ಪುನರ್ ಜೀವಿತಗೊಳಿಸುವವರೆವಿಗೆ (ಯಾವುದು ಮೊದಲೋ ಅಲ್ಲಿಯವರೆವಿಗೆ) ಐ.ಎ.ಎಸ್. ಸೀನಿಯರ್ ಸ್ಕೇಲ್ ವೇತನ ಶ್ರೇಣಿಗೆ ಕೆಳದರ್ಜೆಗಿಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ (4)ರಲ್ಲಿರುವ ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಸೇವೆಗಳು–1)ರವರ ದಿನಾಂಕ 16–03–2011ರ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ದಿನಾಂಕ 31–07–2011ರವರೆಗೆ ಅಥವಾ ಹುದ್ದೆಯನ್ನು ಪುನರ್ ಜೀವಿತಗೊಳಿಸುವವರೆಗೆ (ಯಾವುದು ಮೊದಲೋ ಅಲ್ಲಿಯವರೆಗೆ) ಐ.ಎ.ಎಸ್. ಸೀನಿಯರ್ ಸ್ಕೇಲ್ ವೇತನ ಶ್ರೇಣಿಗೆ ಕೆಳದರ್ಜೆಗಿಳಿಸಿ ಆದೇಶ ಹೊರಡಿಸುವಂತೆ ಸೂಚಿಸಿದ್ದಾರೆ. ಆದ್ದರಿಂದ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 31 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ : 23–03–2011**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಮೇರೆಗೆ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ 31–07–2011ರವರೆಗೆ ಅಥವಾ ಈ ಹುದ್ದೆಯನ್ನು ಪುನರ್ ಜೀವಿತಗೊಳಿಸುವವರೆಗೆ (ಯಾವುದು ಮೊದಲೋ ಅಲ್ಲಿಯವರೆಗೆ) ಐ.ಎ.ಎಸ್. ಸೀನಿಯರ್ ಸ್ಕೇಲ್ ವೇತನ ಶ್ರೇಣಿಗೆ ಕೆಳದರ್ಜೆಗಿಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ. ಆನಂದ್ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 950

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

ತಿದ್ದುಪಡಿ

ಸಂಖ್ಯೆ: ಸಿಐ 39 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ 26–03–2011

**ವಿಷಯ** : ಸಾವರಿನ್ ಡಿಸ್ಟಿಲರೀಸ್ ಲಿ., ರವರು ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು, ತೇರ್‌ದಾಳ್ ಗ್ರಾಮದಲ್ಲಿ ಸ್ಥಾಪಿಸಲಿರುವ 30 ಮೆ.ವ್ಯಾಟ್ ಸಹ ವಿದ್ಯುತ್ ಘಟಕ ಮತ್ತು 120 ಕೆ.ಎಲ್.ಪಿ.ಡಿ. ಡಿಸ್ಟಿಲರಿ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡಿರುವ ಸರ್ಕಾರದ ಆದೇಶಕ್ಕೆ ತಿದ್ದುಪಡಿ ಬಗ್ಗೆ.

ಸರ್ಕಾರದ ಆದೇಶ ಸಂಖ್ಯೆ ಸಿಐ 101 ಎಸ್‌ಜಿಎಫ್ 2009, ದಿನಾಂಕ 13–04–2010ರಲ್ಲಿ "ಸಾವರಿನ್ ಡಿಸ್ಟಿಲರೀಸ್ ಲಿಮಿಟೆಡ್"ರವರಿಗೆ ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕು, ತೇರ್‌ದಾಳ್ ಎಂಬಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ತಾತ್ವಿಕ ಅನುಮೋದನೆ ನೀಡಲಾಗಿದ್ದು, ಈ ಆದೇಶದಲ್ಲಿ "ಸಾವರಿನ್ ಡಿಸ್ಟಿಲರೀಸ್ ಲಿ." ಎಂದು ಎಲ್ಲೆಲ್ಲಿ ನಮೂದಿಸಲಾಗಿದೆಯೋ ಅಲ್ಲಿ ಇನ್ನು ಮುಂದೆ "ಸಾವರಿನ್ ಇಂಡಸ್ಟ್ರೀಸ್ ಲಿಮಿಟೆಡ್" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದ್ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. ನಂ. 951

## COMMERCE AND INDUSTRIES SECRETARIAT

**CORRIGENDUM**

No. CI 39 SGF 2011, Bangalore, Dated 26-03-2011

In Government Notification No. CI 101 SGF 2009, dated 13-04-2010, wherever the words "Sovereign Distilleries Limited" the words "Sovereign Industries Limited" shall be substituted.

By Order and in the name of the Governor of Karnataka,
**P. Ananda Kumar**
Desk Officer (Sugar)
Commerce & Industries Department

P.R. 952

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಒಂಟಗೋಡಿ ಗ್ರಾಮದ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–9/2010–11/1301, ದಿನಾಂಕ 09–03–2011.

2. ಸರ್ಕಾರದ ಆದೇಶ ಸಂಖ್ಯೆ ಸನೀಇ 10 ನಯೋಕಾ 2010, ದಿನಾಂಕ 27–11–2010

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಒಂಟಗೋಡಿ ಗ್ರಾಮದ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 06–12–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 07–12–2010 |
| ಟೈಮ್ಸ್ ಆಫ್ ಇಂಡಿಯಾ ಆಂಗ್ಲ ದಿನಪತ್ರಿಕೆ | 07–12–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 20–01–2011 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,51,06,336/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010–11) ಟೆಂಡರಿಗೆ ಇಡಲಾದ ಮೊತ್ತ | | | ರೂ. 1,85,34,525/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಜಿ. ಮಸ್ತಾನಯ್ಯ ಪ್ರಥಮ ದರ್ಜೆ ಗುತ್ತಿಗೆದಾರರು | 2,23,62,458/– | 48.03 ಹೆಚ್ಚು | 20.65 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಿ. ಮಸ್ತಾನಯ್ಯ 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 20.65 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 18–03–2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 11.00ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,85,34,525/–ಗಳ ಮೇಲೆ ಶೇ. 10ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,03,87,978/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಅದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 11 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ : 18–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಒಂಟಗೋಡಿ ಗ್ರಾಮದ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,85,34,525/–ಗಳ ಮೇಲೆ ಶೇ. 10ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,03,87,978/–ಗಳಿಗೆ (ರೂ. ಎರಡು ಕೋಟಿ ಮೂರು ಲಕ್ಷ ಎಂಭತ್ತೇಳು ಸಾವಿರದ ಒಂಭೈನೂರ ಎಪ್ಪತ್ತೆಂಟು) ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು

ಈ ಅದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 953

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಯಾದಗಿರ ಶಹಾಪುರ ತಾಲ್ಲೂಕಿನ ಶಿರವಾಳ ಗ್ರಾಮದ ಹತ್ತಿರ ಶಿರವಾಳ ನಾಲೆಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋಧಿಸುವ ಕುರಿತು.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜಾ/ಎಇ-5/2010-11/939 ದಿನಾಂಕ 22.02.2011

2. ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(10) ದಿನಾಂಕ 24/12/2009

**ಪ್ರಸ್ತಾವನೆ:**

ಯಾದಗಿರ ಜಿಲ್ಲೆ ಶಹಾಪುರ ತಾಲ್ಲೂಕಿನ ಶಿರವಾಳ ಗ್ರಾಮದ ಹತ್ತಿರ ಶಿರವಾಳ ನಾಲೆಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಕೈಗೊಳ್ಳಲು ಭಾರತ ಸರ್ಕಾರದ ಅನುಮೋಧನೆ ದೊರಕಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 04.12.2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 08.12.2010 |
| ಕರ್ನಾಟಕ ರಾಜ್ಯ ಪತ್ರ | 09.12.2010 |

ಈ ಟಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ನ್ನು ದಿನಾಂಕ: 17.02.2011ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 84,03,848/- | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010-11) ಟೆಂಡರಿಗೆ ಇಡಲಾದ ಮೊತ್ತ | | ರೂ. 1,09,51,855/- | |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಚನ್ನನಗೌಡ ಎಸ್ ಪಾಟೀಲ ಪ್ರಥಮ ದರ್ಜೆ ಗುತ್ತಿಗೆದಾರರು | 1,20,71,790/- | 43.65 ಹೆಚ್ಚು | 10.226 ಹೆಚ್ಚು |

ಮೇಲ್ಕಂಡಂತೆ ಶ್ರೀ ಚನ್ನನಗೌಡ ಎಸ್ ಪಾಟೀಲ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 10.226 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 14/03/2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 8ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,09,51,855/-ಗಳ ಮೇಲೆ ಶೇ. 6ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,16,08,966/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 07 ಅಪಿಬಂ 2011(ತಾಂತ್ರಿಕ) ಬೆಂಗಳೂರು, ದಿನಾಂಕ: 25ನೇ ಮಾರ್ಚಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಯಾದಗಿರ ಜಿಲ್ಲೆ ಶಹಾಪುರ ತಾಲ್ಲೂಕಿನ ಶಿರವಾಳ ಗ್ರಾಮದ ಹತ್ತಿ ಶಿರವಾಳ ನಾಲೆಗೆ ಅಡ್ಡಲಾಗಿ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,09,51,855/-ಗಳ ಮೇಲೆ ಶೇ. 6ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,16,08,966/- ಗಳಿಗೆ (ರೂ ಒಂದು ಕೋಟಿ ಹದಿನಾರು ಲಕ್ಷ ಎಂಟು ಸಾವಿರದ ಒಂಬೈನೂರ ಅರವತ್ತಾರು) ಶ್ರೀ ಚನ್ನನಗೌಡ ಎಸ್ ಪಾಟೀಲ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾಯಾದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ರುದ್ರಮೂರ್ತಿ)

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 954

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

ವಿಷಯ : ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಕೊಟಗಾ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬಿ.ಸಿ.ಬಿ. ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ ಮುಇಂ/ಸನೀ(ಉ)ವ/ಬಿಜೆಪಿ/ಎಇ–5/2010–11/6793 ದಿನಾಂಕ: 28.12.2010

2. ಸರ್ಕಾರದ ಆದೇಶ ಸಂಖ್ಯೆ: ಸನೀಇ 06 ನಯೋಕಾ 2009, ದಿನಾಂಕ: 06/01/2010

**ಪ್ರಸ್ತಾವನೆ:–**

ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಕೊಟಗಾ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬಿ.ಸಿ.ಬಿ. ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 06.08.2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 31.07.2010 |
| ಕರ್ನಾಟಕ ರಾಜ್ಯ ಪತ್ರ | 05.08.2010 |
| ವಿಜಯ ಕರ್ನಾಟಕ ದಿನಪತ್ರಿಕೆ/ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನಪತ್ರಿಕೆ | 05.08.2010 |

ಈ ಟಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ: 19.11.2010ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 1,83,23,489/– | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010–11) ಟೆಂಡರಿಗೆ ಇಡಲಾದ ಮೊತ್ತ | | ರೂ. 1,89,58,737/– | |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಶ್ರೀ ಸಿದ್ದಣ್ಣ ಸಿ. ತಿಳಗೊಳ ಪ್ರಥಮ ದರ್ಜೆ ಗುತ್ತಿಗೆದಾರರು | 2,34,14,827/– | 27.786 ಹೆಚ್ಚು | 23.504 ಹೆಚ್ಚು |

ಮೇಲ್ಕಂಡಂತೆ ಶ್ರಿ ಸಿದ್ದಣ್ಣ ಸಿ. ತಿಳಗೊಳ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಆರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 23.504 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 14/03/2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 10ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,89,58,737/–ಗಳ ಮೇಲೆ ಶೇ. 6ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,00,96,261/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 01 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 25ನೇ ಮಾರ್ಚ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಕೊಟಗಾ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬಿ.ಸಿ.ಬಿ. ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,89,58,737/–ಗಳ ಮೇಲೆ ಶೇ. 6ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,00,96,261/–ಗಳಿಗೆ (ರೂ ಎರಡು ಕೋಟಿ ತೊಂಭತ್ತಾರು ಸಾವಿರದ ಇನ್ನೂರ ಅರವತ್ತೊಂದು) ಶ್ರೀ ಸದ್ದಣ್ಣ ಸಿ. ತಿಳಗೊಳ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
(ರುದ್ರಮೂರ್ತಿ)
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 955 ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ರಾಯಚೂರು ಜಿಲ್ಲೆ, ಲಿಂಗಸೂಗೂರು ತಾಲ್ಲೂಕು, ಬೋಗಾಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚುವರಿ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/5147,ದಿನಾಂಕ: 13/09/10.

**ಪ್ರಸ್ತಾವನೆ:**

ರಾಯಚೂರು ಜಿಲ್ಲೆ, ಲಿಂಗಸೂಗೂರು ಭೋಗಾಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭೋಗಾಪುರ, ಬೊಮ್ಮನಾಳ ಮತ್ತು ಬಂಡಿಸುಂಕಾಪೂರ ಗ್ರಾಮಗಳ ಜಮೀನುಗಳಿಗೆ ಎಲ್.ಎ.ಸಿ.ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ರೂ. 13,29,400/–ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 13.09.2010ರ ಪತ್ರದಲ್ಲಿ ಕೋರಿದ್ದಾರೆ.

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ: 16/09/76 ಮತ್ತು 17/05/79ರಂದು ಹೊರಡಿಸಿದೆ.
– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರದ ಐತೀರ್ಪುನ್ನು ದಿನಾಂಕ: 30/11/82 ಮತ್ತು 10/03/83ರಂದು ಘೋಷಿಸಿದ್ದಾರೆ.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯ ಕುಷ್ಟಗಿಯಲ್ಲಿ ಎಲ್.ಎ.ಸಿ. ಸಂಖ್ಯೆ: 192 ರಿಂದ 201/98 ಮತ್ತು 202 ರಿಂದ 211/98ನ್ನು ಸಲ್ಲಿಸಿದ್ದು, ನ್ಯಾಯಾಲಯದ ದಿನಾಂಕ: 23/09/1984ರಂದು ನೀಡಿರುವ ಆದೇಶಗಳಲ್ಲಿ ಈ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ರೂ.9800–00ಗಳಿಗೆ ನಿಗದಿಪಡಿಸಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಇ.ಪಿ | ಸ.ನಂ | ವಿಸ್ತೀರ್ಣ ಎ–ಗುಂ | ಗ್ರಾಮ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|
| 1 | 195/98 | 131/06 | 32/3 | 0–13 | ಬೊಮ್ಮನಾಳ | 747 |
| 2 | 167/98 | 139/06 | 37,33/3 | 4–33 | ಬೊಮ್ಮನಾಳ | 110114 |
| 3 | 198/98 | 138/06 | 18/2–3 | 1–08 | ಭೋಗಾಪುರ | 23966 |
| 4 | 199/98 | 137/06 | 18/2–ಎ | 1–08 | ಭೋಗಾಪುರ | 23966 |
| 5 | 202/98 | 134/06 | 18/2–1 | 1–16 | ಭೋಗಾಪುರ | 27944 |
| 6 | 192/98 | 143/06 | 32/1, 32/7 | 5–12 | ಬೊಮ್ಮನಾಳ | 132494 |
| 7 | 193/98 | 142/06 | 32/2 | 1–39 | ಬೊಮ್ಮನಾಳ | 49431 |
| 8 | 194/98 | 132/06 | 32/6 | 4–15 | ಬೊಮ್ಮನಾಳ | 109407 |
| 9 | 195/98 | 131/06 | 32/4, 32/3 | 2–02, 0–23 | ಬೊಮ್ಮನಾಳ | 65667 |
| 10 | 197/98 | 139/06 | 37 | 9–00 | ಬೊಮ್ಮನಾಳ | 224374 |
| 11 | 200/98 | 136/06 | 32/5 | 11–12 | ಬೊಮ್ಮನಾಳ | 282354 |
| 12 | 201/98 | 132/06 | 36/ಎ | 1–36 | ಬಂಡಿಸುಂಕಾಪೂರ | 47558 |
| 13 | 203/98 | 133/06 | 33/4 | 1–00 | ಬಂಡಿಸುಂಕಾಪೂರ | 25078 |
| 14 | 196/98 | 140/06 | 4/5 | 0.05 | ಬಂಡಿಸುಂಕಾಪೂರ | 3221 |
| 15 | 204/98 | 141/06 | 5/2, 5/3, 5/4, 5/6 | 7–33 | ಬಂಡಿಸುಂಕಾಪೂರ | 196354 |
| | ಒಟ್ಟು | | | | | 1322675 |

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹ ಪ್ರಕರಣವಲ್ಲವೆಂದು ಕಾನೂನು ಇಲಾಖೆಯ ಪತ್ರ ಸಂಖ್ಯೆ: ಲಾ 285 ಎಲ್ಎಸ್‌ಜಿ 99 ದಿನಾಂಕ: 22/06/99ರಲ್ಲಿ ಅಭಿಪ್ರಾಯ ನೀಡಿದೆ.

ಪ್ರಸ್ತಾವನೆಯಲ್ಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 150 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ರಾಯಚೂರು ಜಿಲ್ಲೆ, ಲಿಂಗಸೂಗೂರು ಭೋಗಾಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭೋಗಾಪುರ, ಬೊಮ್ಮನಾಳ ಮತ್ತು ಬಂಡಿಸುಂಕಾಪೂರ ಗ್ರಾಮಗಳ ಮೇಲ್ಕಂಡ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ.. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಪರಿಹಾರ ಪಾವತಿಸಲು ರೂ.13,22,675–00ಗಳನ್ನು(ಹದಿಮೂರು ಲಕ್ಷದ ಇಪ್ಪತ್ತೆರಡು ಸಾವಿರದ ಆರುನೂರ ಎಪ್ಪತ್ತೈದು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸಿತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ: 19/03/2011ರಲ್ಲಿ ಒದಗಿಸಿರುವ ಪೂರಕ ಅನುದಾನ–IIIರಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20/10/2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.ನಂ:956

ಗೋಪಾಲ್

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದಂತೆ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2009–10/5711, ದಿನಾಂಕ: 25/09/2009.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸಾಲೇಬೀರನಹಳ್ಳಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯ ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸಲು ರೂ. 1,31,963.00ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 25/09/2009ರ ಪತ್ರದಲ್ಲಿ ಕೋರಿರುತ್ತಾರೆ.

1. ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 22/09/1988.
2. ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 11(ಎ)ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ: 09/05/1991.

ಭೂಸ್ವಾಧೀನಕ್ಕೊಳಪಟ್ಟ ಸಾಲೇಬೀರನಹಳ್ಳಿಗ್ರಾಮದ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಪರಿಹಾರ ಪಡೆದು ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ 1894ರ ಕಲಂ 18(1)ರಡಿ ಗುಲ್ಬರ್ಗಾ (ಹಿರಿಯ ಶ್ರೇಣಿ), ಸಿವಿಲ್ ನ್ಯಾಯಾಲಯದಲ್ಲಿ ಎಲ್.ಎ.ಸಿ. ಸಲ್ಲಿಸಿದ್ದು, ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯ ಅಭಿಪ್ರಾಯ ನೀಡಿರುತ್ತದೆ.

ಸಿವಿಲ್ ನ್ಯಾಯಾಲಯವು ಹೆಚ್ಚುವರಿ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಎಲ್.ಎ.ಸಿ ಸಂಖ್ಯೆ | ಸಾಲೇಬೀರನಹಳ್ಳಿ ಗ್ರಾಮದ ಸರ್ವೆ ನಂಬರ್ | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ |
|---|---|---|---|---|
| 1 | 33/94 | 20/2 | 1–20 | 131963.00 |

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 149 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 25/03/2011.**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸಾಲೇಬೀರನಹಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ ಸಂಖ್ಯೆ:33194 ಪ್ರಕರಣದಲ್ಲಿ

ನೀಡಿದ ತೀರ್ಪಿನಂತೆ ಪರಿಹಾರ ರೂ.1,31,963-00 (ಒಂದು ಲಕ್ಷದ ಮೂವತ್ತೊಂದು ಸಾವಿರದ ಒಂಭೈನೂರ ಆರುವತ್ತಮೂರು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಅನುಮೋದನೆ ನೀಡಿದೆ.

ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-0-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ:ಆಇ 01 ಬಿಎಸ್‌ಜಿ 2011, ದಿನಾಂಕ: 19/03/2011ರಲ್ಲಿ ಒದಗಿಸಿರುವ ಪೂರಕ ಅನುದಾನ-IIIರಿಂದ ಭರಿಸತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ: 16/08/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಗೋಪಾಲ್
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್.ನಂ:957

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಐನಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ಇವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010-11/4972, ದಿನಾಂಕ 31.08.2010.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಐನಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಐನಾಪುರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ಚಿಂಚೋಳಿ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ:13/07ರಲ್ಲಿ ದಿನಾಂಕ: 07/08/09ರಂದು ನೀಡಿರುವ ಆದೇಶವನ್ನು ಆಧರಿಸಿ, ಸ್ವಾಧೀನಕ್ಕೊಳಪಟ್ಟ ಇತರೆ ಜಮೀನುಗಳಿಗೆ ವಿಶೇಷ ಭೂಸ್ವಾಧೀನಾಧಿಕಾರಿಗಳು, ಭೂಸ್ವಾಧೀನ ಕಾಯ್ದೆ ಕಲಂ 28 (ಎ)ರಡಿ ರಚಿಸಿರುವ ಐತೀರ್ಪಿನಂತೆ ಮೊತ್ತ ರೂ.9,05,670-00ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ ಓದಲಾದ ದಿನಾಂಕ: 07/06/10ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ: 06/07/2000ರಂದು ಹೊರಡಿಸಿದೆ. ಭೂಸ್ವಾಧೀನಕ್ಕೆ ಒಳಪಟ್ಟ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿಗಳು ದಿನಾಂಕ: 20/11/2003ರಂದು ರಚಿಸಿರುವ ಐತೀರ್ಪಿನಲ್ಲಿ ಮೇಲ್ಕಂಡ ಜಮೀನಿನ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆ ಖುಷ್ಕಿ ಜಮೀನಿಗೆ ರೂ.16,900.00 ಮತ್ತು ಬಾಗಾಯ್ತು ಜಮೀನಿಗೆ ರೂ.25,000.00ಗಳನ್ನು ನಿಗದಿಪಡಿಸಿರುತ್ತಾರೆ. ಈ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಕೋರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಚಿಂಚೋಳಿ ಇಲ್ಲಿ ಸಲ್ಲಿಸಿದ ಎಲ್.ಎ.ಸಿ ಸಂಖ್ಯೆ: 31/07ರಲ್ಲಿ ದಿನಾಂಕ: 07/08/2009ರಂದು ನೀಡಿದ ಆದೇಶದಲ್ಲಿ ಈ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ.38,000.00ಗಳನ್ನು ನಿಗದಿಪಡಿಸಿರುತ್ತಾರೆ.

ಸಿವಿಲ್ ನ್ಯಾಯಾಲಯದ ತೀರ್ಪನ್ನು ಆದರಿಸಿ, ಸರ್ವೆ ನಂ: 31/ಸಿ ಜಮೀನಿನ ಭೂಮಾಲೀಕರು ಹೆಚ್ಚಿನ ಪರಿಹಾರ ಕೋರಿ ಸಲ್ಲಿಸಿದ ಮನವಿಯನ್ನು ಪರಿಶೀಲಿಸಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ದಿನಾಂಕ: 25/02/2010ರಂದು ಐತೀರ್ಪಿನಲ್ಲಿ ರೂ.9,05,679.00ಗಳ ಪರಿಹಾರ ನಿಗದಿಪಡಿಸಿರುತ್ತಾರೆ.

ಮುಖ್ಯ ಇಂಜಿನಿಯರ್‌ರವರ ಪ್ರಸ್ತಾವವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 138 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2011**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಐನಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಐನಾಪುರ ಗ್ರಾಮದ ಸರ್ವೆ ನಂಬರ್ 31/ಸಿ ನ ಜಮೀನುಗಳಿಗೆ ವಿಶೇಷ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಿರುವ ಐತೀರ್ಪಿನಂತೆ ರೂ.9,05,679-00ಗಳನ್ನು ಒಟ್ಟು (ಒಂಭತ್ತು ಲಕ್ಷದ ಐದು ಸಾವಿರದ ಆರುನೂರ ಎಪ್ಪತ್ತೊಂಭತ್ತು ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪರಿಹಾರ ಪಾವತಿಸಲು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಲೆಕ್ಕಾಚಾರ ತ:ಖ್ತೆಯನ್ನು ಮತ್ತೊಮ್ಮೆ ದೃಢೀಕರಿಸಿಕೊಂಡು ಪಾವತಿಸಕ್ಕದ್ದು. ಎರಡನೇ ಬಾರಿ ಹೆಚ್ಚಿನ ಮೊತ್ತ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ: 19/03/2011ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
(ಗೋಪಾಲ್),
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್. ನಂ. 976

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ, ಅಫಜಲಪೂರ ತಾಲ್ಲೂಕಿನ ಅಫಜಲಪೂರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2008–09/4751, ದಿನಾಂಕ: 27.08.2008.

**ಪ್ರಸ್ತಾವನೆ:–**

ಗುಲ್ಬರ್ಗಾ ಜಿಲ್ಲೆ, ಅಫಜಲಪೂರ ತಾಲ್ಲೂಕಿನ ಅಫಜಲಪೂರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಫಜಲಪೂರ ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚಿನ ಪರಿಹಾರ ಪಾವತಿಸಲು ರೂ.9,65,400–00ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 27/08/2008ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 08/02/1990ರ ಪ್ರಕಾರ ಭೂಸ್ವಾಧೀನಕ್ಕೆ ಒಳಪಟ್ಟ ಅಫಜಲಪೂರ ಗ್ರಾಮದ ಸರ್ವೆ ನಂ.55/4ರ 0–35 ಎಕರೆ ಹಾಗೂ ಸರ್ವೆ ನಂ:42/1ರ 3–20 ಎಕರೆ ಜಮೀನಿನ ಭೂಮಾಲೀಕರು ಐತೀರ್ಪಿನಂತೆ ಪರಿಹಾರ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಸಲ್ಲಿಸಿರುವ ಎಲ್.ಎ.ಸಿ. ಸಂಖ್ಯೆ:942/97 ಮತ್ತು 338/94ರಲ್ಲಿ ನ್ಯಾಯಾಲಯವು ದಿನಾಂಕ: 28/10/1999ರಂದು ನೀಡಿರುವ ಆದೇಶದಲ್ಲಿ ಈ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ.20,000–00ಗಳಿಗೆ ನಿಗದಿಪಡಿಸಿದೆ. ಎಲ್.ಎ.ಸಿ. 942/97 ಆದೇಶದ ವಿರುದ್ಧ ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಜಿಲ್ಲಾ ನ್ಯಾಯಾಲಯ, ಗುಲ್ಬರ್ಗಾ ಇಲ್ಲಿ ಸಲ್ಲಿಸಿರುವ ಎಲ್.ಎ.ಸಿ.ಎ 37/2000ನ್ನು ಪುರಸ್ಕರಿಸಿ ಪರಿಹಾರ ಮೊತ್ತವನ್ನು ರೂ.50,000–00ಗಳಿಗೆ ಹೆಚ್ಚಿಸಿದ್ದು, ಎಲ್.ಎ.ಸಿ. ಸಂಖ್ಯೆ:838/94ರ ಆದೇಶದ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ಎಂ.ಎಫ್.ಎ.ಯನ್ನು ಪರಿಶೀಲಿಸಿ ದಿನಾಂಕ: 30/07/2001ರಂದು ನೀಡಿರುವ ಆದೇಶದಲ್ಲಿ ಎಲ್.ಎ.ಸಿ. ಸಂಖ್ಯೆ: 838/94ರಲ್ಲಿ ನೀಡಿದ ಆದೇಶವನ್ನು ತಿರಸ್ಕರಿಸಿದೆ.

ಮೇಲ್ಕಂಡ ಆದೇಶಗಳ ವಿರುದ್ಧ ಮೇಲ್ಮನವಿ ಸಲ್ಲಿಸಲು ಇವು ಅರ್ಹ ಪ್ರಕರಣವಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ತಿಳಿಸಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 110 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 25ನೇ ಮಾರ್ಚ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ, ಗುಲ್ಬರ್ಗಾ ಜಿಲ್ಲೆ, ಅಫಜಲಪೂರ ತಾಲ್ಲೂಕಿನ ಅಫಜಲಪೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಫಜಲ್‌ಪುರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ:947/99 ಮತ್ತು 838/94ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ.9,65,400–00 (ಒಂಭತ್ತು ಲಕ್ಷದ ಅರವತ್ತೈದು ಸಾವಿರದ ನಾಲ್ಕುನೂರು ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಕಂಡ ಷರತ್ತುಗೊಳಪಟ್ಟು ನೀಡಲು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಪೂರಕ ಅನುದಾನ–IIIರಿಂದ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ: 20/10/2010ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
(ಗೋಪಾಲ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್. ನಂ:977

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಬಿಜಾಪುರ ಜಿಲ್ಲೆ ಮತ್ತು ತಾಲ್ಲೂಕಿನ ಧನರ್ಗಿ ಗ್ರಾಮದ ಹತ್ತಿರ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಠೇವಣಿ ಮಾಡುವ ಬಗ್ಗೆ.

**ಓದಲಾಗಿದೆ** : **ಮು**ಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಭೂಸ್ವಾ/2010-11/1025, ದಿನಾಂಕ: 24/04/10.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ ಮತ್ತು ತಾಲ್ಲೂಕಿನ ಧನರ್ಗಿ ಗ್ರಾಮದ ಹತ್ತಿರ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಅವಾರ್ಡ್ ಪೂರ್ವ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 24/02/11 ಪತ್ರದಲ್ಲಿ ಕೋರಿದ್ದಾರೆ.

ಕಂದಾಯ ಇಲಾಖೆಯ ಸುತ್ತೋಲೆ ಸಂಖ್ಯೆ:ಕಂಇ 42 ಭೂಸ್ವಾಹಾ 2000, ದಿನಾಂಕ: 08/10/2001ರಲ್ಲಿ ಸೂಚಿಸಿರುವಂತೆ 4(1)ರ ಅಧಿಸೂಚನೆ ಹೊರಡಿಸುವ ಪೂರ್ವದಲ್ಲಿ ಭೂಸ್ವಾಧೀನ ಪ್ರಕ್ರಿಯೆಗಾಗಿ ಸಂಭವನೀಯ ವೆಚ್ಚದ ಶೇ. 50% ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 35 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2011**

ಬಿಜಾಪುರ ಜಿಲ್ಲೆ ಮತ್ತು ತಾಲ್ಲೂಕಿನ ಧನರ್ಗಿ ಗ್ರಾಮದ ಹತ್ತಿರ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ರೂ.10,25,285-00ಗಳನ್ನು (ಹತ್ತು ಲಕ್ಷದ ಇಪ್ಪತ್ತೈದು ಸಾವಿರದ ಇನ್ನೂರ ಎಂಭತ್ತೈದು ರೂ.ಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ: 19/03/2011ರಲ್ಲಿ ಒದಗಿಸಿರುವ ಪೂರಕ ಅನುದಾನ-IIIರಿಂದ ಭರಿಸುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ: 20/10/2010ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
(ಗೋಪಾಲ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್. ನಂ:978

## ಜಲ ಸಂಪನ್ಮೂಲ ಸಚಿವಾಲಯ

ವಿಷಯ: ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕು ಹರಗನಹಳ್ಳಿ ಗ್ರಾಮದ ಬಳಿ ಸೂಳೆಕೆರೆ ಹಳ್ಳಕ್ಕೆ ಅಡ್ಡಲಾಗಿ ನಿರ್ಮಿಸಿರುವ ಚೆಕ್ ಡ್ಯಾಂನ ಕೆಳಭಾಗದಲ್ಲಿ ಹಳ್ಳದ ಎಡ ಮತ್ತು ಬಲದಂಡೆಗಳ ಸಂರಕ್ಷಣಾ ಕಾಮಗಾರಿಯ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ದಿನಾಂಕ: 24/01/2011 ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸ(ದ)ತಾಂ-4/ಸಇಂ-10/ದಾವಣಗೆರೆ(ಜಿ)/ಹರಿಹರ ತಾ/ ಹರಗನಹಳ್ಳಿ/ 2010-11/205,

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು ಹರಗನಹಳ್ಳಿ ಗ್ರಾಮದ ಬಳಿ ಸೂಳೆಕೆರೆ ಹಳ್ಳಕ್ಕೆ ಅಡ್ಡಲಾಗಿ ನಿರ್ಮಿಸಿರುವ ಚೆಕ್ ಡ್ಯಾಂನ ಕೆಳಭಾಗದಲ್ಲಿ ಹಳ್ಳದ ಎಡ ಮತ್ತು ಬಲದಂಡೆಗಳ ಸಂರಕ್ಷಣಾ ಕಾಮಗಾರಿಯ 2010-11ನೇ ಸಾಲಿನ ದರಪಟ್ಟಿಯಂತೆ ತಯಾರಿಸಲಾದ 33.07 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಮೇಲೆ ಓದಲಾದ ದಿನಾಂಕ: 24/01/2011ರ ಪತ್ರದಲ್ಲಿ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸದರಿ ಚೆಕ್ ಡ್ಯಾಂನ್ನು 2008ನೇ ಸಾಲಿನಲ್ಲಿ ರೂ.50.00ಲಕ್ಷ ವೆಚ್ಚ ಮಾಡಿ ನಿರ್ಮಿಸಲಾಗಿದೆ. ಈ ಚೆಕ್ ಡ್ಯಾಂ ನಿರ್ಮಾಣದಿಂದ ಈ ಇಲಾಖೆಯ ಹರಗನಹಳ್ಳಿ ಹಲಸಬಾಳು ಮತ್ತು ಹನಗವಾಡಿ ಏತ ನೀರಾವರಿ ಯೋಜನೆಗಳ 1800 ಎಕರೆ ಅಚ್ಚುಕಟ್ಟಿಗೆ ಅನುಕೂಲವಾಗುತ್ತಿದೆ. ಇದಲ್ಲದೆ ಈ ಹಳ್ಳದ ಎರಡು ದಂಡೆಯಲ್ಲಿ 2.50ಕಿಮಿ ಉದ್ದಕ್ಕೆ ರೈತರು ಪಂಪ್ ಸೆಟ್ ಅಳವಡಿಸಿ ನೀರಾವರಿಗೆ ಬಳಸುತ್ತಿರುವುದಾಗಿ ವರದಿಯಾಗಿದೆ.

ಸದರಿ ಚೆಕ್ ಡ್ಯಾಂ ಕೆಳಭಾಗದಲ್ಲಿ 135 ಮಿ. ವರೆಗೆ ದಂಡೆಗಳು ಕೊರೆದಿರುವುದಾಗಿ ತಿಳಿಸಿ ಸದರಿ ಚೆಕ್ ಡ್ಯಾಂ ಸಂರಕ್ಷಣೆಗಾಗಿ ಎರಡು ದಂಡೆಗೆ ಕಾಂಕ್ರಿಟ್ ಗೋಡೆ ನಿರ್ಮಿಸಲು ರೂ.33.07ಲಕ್ಷ ಮೊತ್ತ ಆಗುವುದಾಗಿ ಈ ಬಗ್ಗೆ ಅಂದಾಜನ್ನು ತಯಾರಿಸಿ ಸಲ್ಲಿಸಿರುತ್ತಾರೆ. ಸದರಿ ಕಾಮಗಾರಿಯನ್ನು ತುರ್ತಾಗಿ ಕೈಗೊಳ್ಳಬೇಕೆಂದು ತಿಳಿಸಿ ಇಲ್ಲದ್ದಲ್ಲಿ ಚೆಕ್ ಡ್ಯಾಂ ಕೊಚ್ಚಿ ಹೋಗುವ ಸಂಭವವಿರುವುದಾಗಿ ತಿಳಿಸಲಾಗಿದೆ.

ಸದರಿ ನದಿದಂಡೆ ಸಂರಕ್ಷಣಾ ಕಾಮಗಾರಿಯಾದ ರೂ.33.07ಲಕ್ಷ ಮೊತ್ತ ಅಂದಾಜಿಗೆ ಲೆಕ್ಕ ಶೀರ್ಷಿಕೆ "4711-01-103-1-00-140-ಪ್ರವಾಹ ನಿಯಂತ್ರಣ" ಅಡಿ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 01 ಪ್ರನಿಕಾ (ತಾಂತ್ರಿಕ)2011, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕು ಹರಗನಹಳ್ಳಿ ಗ್ರಾಮದ ಬಳಿ ಸೂಳೆಕೆರೆ ಹಳ್ಳಕ್ಕೆ ಅಡ್ಡಲಾಗಿ ನಿರ್ಮಿಸಿರುವ ಚೆಕ್ ಡ್ಯಾಂನ ಕೆಳಭಾಗದಲ್ಲಿ ಹಳ್ಳದ ಎಡ ಮತ್ತು ಬಲದಂಡೆಗಳ ಸಂರಕ್ಷಣಾ ಕಾಮಗಾರಿಯ 2010–11ನೇ ಸಾಲಿನ ದರಪಟ್ಟಿಯಂತೆ ತಯಾರಿಸಲಾದ 33.07ಲಕ್ಷ ರೂಗಳ (ಮೂವತ್ತಮೂರು ಲಕ್ಷ ಏಳು ಸಾವಿರ ರೂ.ಗಳು ಮಾತ್ರ) ಅಂದಾಜು ಪಟ್ಟಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯ ತೀರುವಳಿ ಪಡೆಯುವುದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
7. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
8. ಈ ಕಾಮಗಾರಿಯನ್ನು 2011–12ನೇ ಸಾಲಿನ ಆಯವ್ಯಯದಲ್ಲಿ ಸೂಕ್ತ ಅನುದಾನದೊಂದಿಗೆ ಸೇರಿಸಲು ಕ್ರಮ ಕೈಗೊಳ್ಳತಕ್ಕದ್ದು.

ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "4711–01–103–1–00–140 ಪ್ರವಾಹ ನಿಯಂತ್ರಣ ಅಡಿ ಭರಿಸುವುದು.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/08ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.ನಂ:979

(ರುದ್ರಮೂರ್ತಿ),

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕು ತಡಕಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಭೂಸ್ವಾಪ್ರ/2010–11/4324, ದಿನಾಂಕ: 28/07/10.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕು ತಡಕಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ತಡಕಲ್ ಗ್ರಾಮದ ಜಮೀನುಗಳಿಗೆ ಆಳಂದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ರೂ.1,79,408/–ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 28/07/2010ರ ಪತ್ರದಲ್ಲಿ ಕೋರಿರುತ್ತಾರೆ.

1. ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ದಿನಾಂಕ: 03/07/2003ರಂದು ಹೊರಡಿಸಿದೆ.
2. ಭೂಸ್ವಾಧೀನಾಧಿಕಾರಿಗಳು ಐತೀರ್ಪು ಹೊರಡಿಸಿದ ದಿನಾಂಕ: 25/07/2004.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಐತೀರ್ಪಿನಂತೆ ಹಣ ಪಡೆದು ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಆಳಂದ ಇಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣಗಳಲ್ಲಿ ನ್ಯಾಯಾಲಯವು ಪ್ರತಿ ಎಕರೆಗೆ ರೂ.51,200/–ಗಳಿಗೆ ಹೆಚ್ಚಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 819 ಎಲ್ಎಸ್‌ಪಿ 2007, ಲಾ 220 ಎಲ್ಎಸ್‌ಪಿ 2007, ಲಾ 825 ಎಲ್ಎಸ್‌ಪಿ 2007, ಲಾ 824 ಎಲ್ಎಸ್‌ಪಿ 2007, ದಿನಾಂಕ: 15/06/07ರ ಪತ್ರಗಳಲ್ಲಿ ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಎಲ್ಎಸಿ ಸಂಖ್ಯೆ | ತಡಕಲ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1. | 19/06 | 812/D | 0–09 | 9679 |
| 2. | 20/06 | 812/ D1 | 0–27 | 28037 |
| 3. | 21/06 | 812/ A2 | 0–06 | 6619 |

| | | | | |
|---|---|---|---|---|
| 4. | 22/06 | 815/3 | 0–10 | 10698 |
| 5. | 29/06 | 812/3 | 1–12 | 53535 |
| 6. | 30/06 | 812/ C | 1–00 | 41296 |
| ಒಟ್ಟು | | | | 149864 |

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 112 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 25/03/2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ತಡಕಲ್ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ತಡಕಲ್ ಗ್ರಾಮಕ್ಕೆ ಸೇರಿದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನಂತೆ ರೂ.1,49,864–00 (ಒಂದು ಲಕ್ಷದ ನಲವತ್ತೊಂಭತ್ತು ಸಾವಿರದ ಎಂಟು ನೂರ ಅರವತ್ನಾಲ್ಕು ರೂಪಾಯಿಗಳು ಮಾತ್ರ)ಗಳ ಪರಿಹಾರ ಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸಕ್ಕದ್ದು, ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು– ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ: 19/03/2011ರಲ್ಲಿ ಒದಗಿಸಿರುವ ಪೂರಕ ಅನುದಾನ– IIIರಿಂದ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ: 20/10/2010ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಗೋಪಾಲ್
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್.ನಂ:980

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಬೊಮ್ಮಂಡಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಾಡುಜಕ್ಕನಹಳ್ಳಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸನೀ(ದ)/ಲೆಶಾ/ಲೆಸ–1/10–11/481, ದಿನಾಂಕ 03–03–2011.

**ಪ್ರಸ್ತಾವನೆ:**

ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಬೊಮ್ಮಂಡಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಾಡುಜಕ್ಕನಹಳ್ಳಿ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಪ್ರಿನ್ಸಿಪಲ್ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಮೇಲೆ ಓದಲಾದ ದಿನಾಂಕ : 03–03–2011ರ ಪತ್ರದಲ್ಲಿ ಕೋರಿದ್ದಾರೆ.

ಈ ಪ್ರಕರಣದಲ್ಲಿ ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ : 15–02–1996 ರಂದು ಹೊರಡಿಸಿದೆ. ಭೂಸ್ವಾಧೀನಾಧಿಕಾರಿಗಳು ದಿನಾಂಕ : 15–01–1998 ರಂದು ರಚಿಸಿರುವ ಐತೀರ್ಪಿನಲ್ಲಿ ಪ್ರತಿ ಎಕರೆ ಜಮೀನಿಗೆ ರೂ. 1.50 ಲಕ್ಷ ಮಾರುಕಟ್ಟೆ ಬೆಲೆ ನಿಗದಿಪಡಿಸಿರುತ್ತದೆ. ಈ ತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರಕ್ಕಾಗಿ ಪ್ರಿನ್ಸಿಪಲ್ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಬೆಂಗಳೂರು ಇಲ್ಲಿ ಸಲ್ಲಿಸಿದ ಎಲ್‌ಎಸಿ ಸಂ. 1/2001 ಮತ್ತು 2/2001ನ್ನು ಪರಿಶೀಲಿಸಿ ನ್ಯಾಯಾಲಯವು ದಿನಾಂಕ : 01–04–2003 ರಂದು ನೀಡಿರುವ ಆದೇಶದಲ್ಲಿ ಮೇಲ್ಕಂಡ ಜಮೀನಿನ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ. 4.00 ಲಕ್ಷಕ್ಕೆ ನಿಗದಿಪಡಿಸಿರುತ್ತದೆ. ಈ ಆದೇಶದ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಎಂಎಫ್‌ಎ ಸಂ : 4941/04 ಮತ್ತು 4942/04ನ್ನು ನ್ಯಾಯಾಲಯವು ದಿನಾಂಕ : 01–02–2008 ರಂದು ವಿಲೇವಾರಿ ಮಾಡಿರುತ್ತದೆ. ಈ ತೀರ್ಪಿನ ವಿರುದ್ಧ ಸರ್ಕಾರದ ಆದೇಶ ಸಂ : ಎಲ್‌ಎಡಬ್ಲ್ಯೂ 228 ಎಲ್‌ಎಸ್‌ಪಿ 2009 ದಿನಾಂಕ : 14–09–2009 ರಲ್ಲಿ ಸಲ್ಲಿಸಿದ ಮೇಲ್ಮನವಿಯನ್ನು ದಿನಾಂಕ : 18–11–2009 ರಂದು ಹಿಂಪಡೆಯಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 34 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2011**

ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಬೊಮ್ಮಂಡಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಾಡುಜಕ್ಕನಹಳ್ಳಿ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಪರಿಹಾರ ಪಾವತಿಸಲು ರೂ. 10,46,301.00 ಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಸರ್ಕಾರ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿಆರ್.ನಂ. 968 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು ಐಮಂಗಲ ಹೋಬಳಿ, ಕಂದಿಕೆರೆ ಗ್ರಾಮದ ಜಮೀನಿಗೆ ಒಪ್ಪಂದದ ಅವಾರ್ಡ್ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1/3/ಭೂಸ್ವಾಧೀನ/10–11/2630, ದಿನಾಂಕ 21–12–2010.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು ಐಮಂಗಲ ಹೋಬಳಿ ಕಂದಿಕೆರೆ ಗ್ರಾಮದ ಸ.ನಂ.11ರಲ್ಲಿ 2–02 ಎಕರೆ ಜಮೀನನ್ನು Consent Award ಮೂಲಕ ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ಪಡೆಯುವ ಸಲುವಾಗಿ ಉಪ ವಿಭಾಗಾಧಿಕಾರಿಗಳು ಮತ್ತು ಭೂಸ್ವಾಧೀನಾಧಿಕಾರಿಗಳು, ಚಿತ್ರದುರ್ಗ ಇವರಲ್ಲಿ ಠೇವಣಿ ಇಡುವ ಸಲುವಾಗಿ ರೂ. 2,42,465/–ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ : 21–12–2010ರ ಪತ್ರದಲ್ಲಿ ಕೋರಿದ್ದಾರೆ.

ಕಂದಿಕೆರೆ ಗ್ರಾಮದ ಸ.ನಂ.11ರಲ್ಲಿ 2–02 ಎಕರೆ ಜಮೀನನ್ನು Consent Award ಮೂಲಕ ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ಪಡೆಯುವ ಸಲುವಾಗಿ ಉಪ ವಿಭಾಗಾಧಿಕಾರಿಗಳು ಮತ್ತು ಭೂಸ್ವಾಧೀನಾಧಿಕಾರಿಗಳು, ಚಿತ್ರದುರ್ಗ ಇವರಲ್ಲಿ ಠೇವಣಿ ಮಾಡಲು ಅನುದಾನ ಬಿಡುಗಡೆ ಮಾಡಲು ನಿರ್ಧರಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 05 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2011**

ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು ಐಮಂಗಲ ಹೋಬಳಿ ಕಂದಿಕೆರೆ ಗ್ರಾಮದ ಸ.ನಂ.11ರಲ್ಲಿ 2–02 ಎಕರೆ ಜಮೀನನ್ನು Consent Award ಮೂಲಕ ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ಪಡೆಯುವ ಸಲುವಾಗಿ ಉಪ ವಿಭಾಗಾಧಿಕಾರಿಗಳು ಮತ್ತು ಭೂಸ್ವಾಧೀನಾಧಿಕಾರಿಗಳು, ಚಿತ್ರದುರ್ಗ ಇವರಲ್ಲಿ ಠೇವಣಿ ಮಾಡಲು ರೂ. 2,42,465/–ಗಳ (ಎರಡು ಲಕ್ಷದ ನಲವತ್ತೆರಡು ಸಾವಿರದ ನಾನೂರ ಅರವತ್ತೈದು ರೂ.ಗಳು ಮಾತ್ರ) ಅನುದಾನ ಬಿಡುಗಡೆ ಮಾಡಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ದಿಂದ ಭರಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿಆರ್.ನಂ. 969 ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)